KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಅಕ್ಟೋಬರ್ ೨೯, ೨೦೦೯ (ಕಾರ್ತೀಕ ೭, ಶಕ ವರ್ಷ ೧೯೩೧) | ಸಂಚಿಕೆ ೪೩ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಬೆಳಗಾಂ ಜಿಲ್ಲೆ, ಅಥಣಿ ತಾಲ್ಲೂಕು ಬೇವನೂರು ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ದಿನಾಂಕ 25/07/09ರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/ 2009–10/4436.

**ಪ್ರಸ್ತಾವನೆ:**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಬೆಳಗಾಂ ಜಿಲ್ಲೆ, ಅಥಣಿ ತಾಲ್ಲೂಕು ಬೇವನೂರು ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಮಲಾಬಾದ್ ಗ್ರಾಮದ ಜಮೀನುಗಳಿಗೆ ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 22/06/2006
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 12/02/2007

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಅಥಣಿ ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣಗಳನ್ನು ದಾಖಲಿಸಿದ್ದು, ಈ ಪ್ರಕರಣಗಳಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ.

ಸಿವಿಲ್ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯು ಪತ್ರ ಸಂಖ್ಯೆ: ಆರ್‌ಡಿ 739 ಎಲ್‌ಸಿಬಿ 2009, ದಿನಾಂಕ 04/03/09ರಲ್ಲಿ ಅಭಿಪ್ರಾಯ ನೀಡಿದೆ. ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ:

| ಕ್ರ. ಸಂ | ಎಲ್‌ಎಸಿ ಸಂಖ್ಯೆ | ಮಲಾಬಾದ್ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|
| 1 | 115/07 | 78/11 | 0–27 | 181382 |

| ಕ್ರ. ಸಂ | ಎಲ್‌ಎಸಿ ಸಂಖ್ಯೆ | ಮಲಾಬಾದ್ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|
| 2 | 116/07 | 78/12 | 0–28 | 188100 |
| 3 | 117/07 | 78/13 | 0–17 | 128795 |
| 4 | 118/07 | 90/1ಅ | 1–04 | 193816 |
| 5 | 119/07 | 90/1ಬ | 0–31 | 180610 |
| | | 90/2ಎ | 0–22 | 96908 |
| 6 | 120/07 | 90/2ಬ | 1–04 | 193816 |
| 7 | 121/07 | 90/3 | 0–33 | 145362 |
| 8 | 122/07 | 90/4 | 0–28 | 140422 |
| 9 | 123/07 | 90/5 | 1–03 | 243324 |
| 10 | 124/07 | 91 | 2–05 | 459531 |
| | ಒಟ್ಟು | | | **2152066** |

- **ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 118 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ: 3ನೇ ಸೆಪ್ಟೆಂಬರ್ 2009**

ಬೆಳಗಾಂ ಜಿಲ್ಲೆ, ಅಥಣಿ ತಾಲ್ಲೂಕು ಬೇವನೂರು ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಮಲಬಾದ್ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ.21,52,066–00ಗಳನ್ನು (ಇಪ್ಪತ್ತೊಂದು ಲಕ್ಷದ ಐವತ್ತೆರಡು ಸಾವಿರದ ಅರವತ್ತಾರು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2168 **ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ಬಿಜಾಪುರ ಜಿಲ್ಲೆ, ಮುದ್ದೇಬಿಹಾಳ ತಾಲ್ಲೂಕು ಸೋಗಲಿ ಹಳ್ಳಕ್ಕೆ ಮೂಕಿಹಾಳ ಹಾಗೂ ಬಾವೂರ ಗ್ರಾಮದ ಹತ್ತಿರ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಇ.ಐ.ಆರ್.ಎಲ್. ಹಾಗೂ ವರ್ಕ್‌ಸ್ಲಿಪ್‌ಗೆ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ:** ಮುಖ್ಯ ಅಭಿಯಂತರರು, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 11/02/2009ರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜೆಪಿ/ಪಿಬಿ–9/ ಮೂಕಿಹಾಳ ಹಾಗೂ ಬಾವೂರ ಬಿಸಿಬಿ/ 2008–09/859.

**ಪ್ರಸ್ತಾವನೆ:**

ಬಿಜಾಪುರ ಜಿಲ್ಲೆ, ಮುದ್ದೇಬಿಹಾಳ ತಾಲ್ಲೂಕಿನ ಸೋಗಲಿ ಹಳ್ಳಕ್ಕೆ ಮೂಕಿಹಾಳ ಹಾಗೂ ಬಾವೂರ ಗ್ರಾಮದ ಹತ್ತಿರ ಬ್ಯಾರೇಜ್ ನಿರ್ಮಾಣ ಕಾಮಗಾರಿಯ 199.65 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಮಂಜೂರಾತಿ ನೀಡಲಾಗಿದೆ. 2006–07ನೇ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತದ ಮೇಲೆ ಶೇ.14.80ರಷ್ಟು ಹೆಚ್ಚುವರಿ ಮೊತ್ತಕ್ಕೆ ಅಂದರೆ ರೂ.2,19,29,488–00ಗಳಿಗೆ ಗುತ್ತಿಗೆದಾರರಿಗೆ ಕಾಮಗಾರಿಯನ್ನು ವಹಿಸಲಾಗಿತ್ತು.

2) ಕಾಮಗಾರಿಯು ಜಾರಿಯಲ್ಲಿದ್ದ ಸಂದರ್ಭದಲ್ಲಿ ಮುಖ್ಯ ಇಂಜಿನಿಯರ್‌ರವರು ದಿನಾಂಕ 19/03/08ರಂದು ಸ್ಥಳ ಪರಿವೀಕ್ಷಣೆ ಮಾಡಿ ನೀಡಿದ ಸೂಚನೆಯಂತೆ ಟೆಂಡರ್‌ನಲ್ಲಿ ನಿಗಧಿಪಡಿಸಿದ್ದಕ್ಕಿಂತ ಹೆಚ್ಚುವರಿ ಪರಿಮಾಣಗಳನ್ನು ಹಾಗೂ ಕೆಲವು ಕೆಲಸಗಳನ್ನು ಹೆಚ್ಚುವರಿಯಾಗಿ ಗುತ್ತಿಗೆದಾರರು ನಿರ್ವಹಿಸಿದ್ದರಿಂದ ಕಾಮಗಾರಿಯ ವೆಚ್ಚದಲ್ಲಿ ಹೆಚ್ಚಳವಾಗಿದೆ. ಇದಲ್ಲದೆ, ಭೂಸ್ವಾಧೀನದಲ್ಲೂ ಸ್ವಲ್ಪ ಹೆಚ್ಚಳವಾಗಿದ್ದು, ಈ ಎಲ್ಲಾ ವೆಚ್ಚಗಳು ಹಾಗೂ ಟೆಂಡರ್ ಪ್ರೀಮಿಯಂ ಸೇರಿದಂತೆ ಕಾಮಗಾರಿಯ ಒಟ್ಟು ಮೊತ್ತ ರೂ.3,04,03,260–00ಗಳಾಗಿದೆ. ಈ ಕಾಮಗಾರಿಯಲ್ಲಿ ಉಂಟಾಗಿರುವ ಹೆಚ್ಚಿನ ಆರ್ಥಿಕ ಹೊರೆಗೆ ಅನುಮೋದನೆ ಕೋರಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 11 ಅಪಿಬಂ 2009, ಬೆಂಗಳೂರು, ದಿನಾಂಕ: 11ನೇ ಸೆಪ್ಟೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಿಜಾಪುರ ಜಿಲ್ಲೆ, ಮುದ್ದೇಬಿಹಾಳ ತಾಲ್ಲೂಕು ಸೋಗಲಿ ಹಳ್ಳಕ್ಕೆ ಮೂಕಿಹಾಳ ಹಾಗೂ ಬಾವೂರ ಗ್ರಾಮದ ಹತ್ತಿರ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ನಿರ್ವಹಣೆಯಲ್ಲಿ ಉಂಟಾಗಿರುವ ಹೆಚ್ಚುವರಿ ಆರ್ಥಿಕ ಹೊರೆ(ಮೂಲ ಅಂದಾಜು ಮೊತ್ತ ಸೇರಿ) ಸೇರಿದಂತೆ ಕಾಮಗಾರಿಯ ಒಟ್ಟು ಪರಿಷ್ಕೃತ ಮೊತ್ತ ರೂ.3,04,03,260–00ಗಳಿಗೆ (ಮೂರು ಕೋಟಿ ನಾಲ್ಕು ಲಕ್ಷದ ಮೂರು ಸಾವಿರದ ಇನ್ನೂರ ಅರವತ್ತು ರೂ.ಗಳು ಮಾತ್ರ) ಸರ್ಕಾರವು ಅನುಮೋದನೆ ನೀಡಿದೆ.

2) ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಲೋಇ 678 ಆಕೋ–1/09, ದಿನಾಂಕ 08/09/2009ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2169 **ಕೆ. ಸುಧಾಕರಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ವಿಷಯ:** ಬೆಳಗಾಂ ಜಿಲ್ಲೆ, ಅಥಣಿ ತಾಲ್ಲೂಕು ಬೇವನೂರು ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ದಿನಾಂಕ 25/07/09ರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/ 2009–10/4437.

**ಪ್ರಸ್ತಾವನೆ:**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಬೆಳಗಾಂ ಜಿಲ್ಲೆ, ಅಥಣಿ ತಾಲ್ಲೂಕು ಬೇವನೂರು ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಬಳ್ಳಿಗೇರಿ ಗ್ರಾಮದ ಜಮೀನುಗಳಿಗೆ ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 22/06/2006
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 12/02/2007

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಅಥಣಿ ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣಗಳನ್ನು ದಾಖಲಿಸಿದ್ದು, ಈ ಪ್ರಕರಣಗಳಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ.

ಸಿವಿಲ್ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯು ಪತ್ರ ಸಂಖ್ಯೆ: ಆರ್‌ಡಿ 713 ಎಲ್‌ಸಿಬಿ 2009, ದಿನಾಂಕ 24/02/09ರಲ್ಲಿ ಅಭಿಪ್ರಾಯ ನೀಡಿದೆ. ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ:

| ಕ್ರ. ಸಂ | ಎಲ್‌ಎಸಿ ಸಂಖ್ಯೆ | ಬಳ್ಳಿಗೇರಿ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|
| 1 | 146/07 | 330/1 | 7–10 | 1840473 |
| | | 327/1 | 2–02 | 600591 |

| ಕ್ರ. ಸಂ | ಎಲ್ಎಸಿ ಸಂಖ್ಯೆ | ಬಳ್ಳಿಗೇರಿ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|
| 2 | 147/07 | 330/2ಅ | 2–22 | 599388 |
| | | 327/2ಅ | 1–10 | 295993 |
| 3 | 148/07 | 330/2ಬ | 2–21 | 593511 |
| | | 327/2ಬ | 1–14 | 395511 |
| | ಒಟ್ಟು | | | **4325467** |

- **ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 119 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ: 3ನೇ ಸೆಪ್ಟೆಂಬರ್ 2009**

ಬೆಳಗಾಂ ಜಿಲ್ಲೆ, ಅಥಣಿ ತಾಲ್ಲೂಕು ಬೇವನೂರು ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಬಳ್ಳಿಗೇರಿ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ.43,25,467–00ಗಳನ್ನು (ನಲವತ್ತ್ಮೂರು ಲಕ್ಷದ ಇಪ್ಪತ್ತೈದು ಸಾವಿರದ ನಾನೂರ ಅರವತ್ತೇಳು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2170 **ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ಕೋಲಾರ ಜಿಲ್ಲೆ, ಬಂಗಾರಪೇಟೆ ತಾಲ್ಲೂಕು ಕಾಮಸಮುದ್ರ ಹೋಬಳಿ ನಾಯಿಹೊಳೆ ಹಳ್ಳಕ್ಕೆ ಅಡ್ಡಲಾಗಿ ಕೆರೆ ನಿರ್ಮಿಸಲು ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ದಿನಾಂಕ 03/06/09ರಂದು ಅಂತ್ಯಗೊಂಡಿರುವ ಪತ್ರ ಸಂಖ್ಯೆ: ಮುಸನೀ(ದ)/ಲೆಶಾ/ಲೆಸ–1/ ಭೂಸ್ವಾಧೀನ/ 09–10/1307.

**ಪ್ರಸ್ತಾವನೆ:**

ಕೋಲಾರ ಜಿಲ್ಲೆ, ಬಂಗಾರಪೇಟೆ ತಾಲ್ಲೂಕು, ಕಾಮಸಮುದ್ರ ಹೋಬಳಿ, ನಾಯಿಹೊಳೆ ಹಳ್ಳಕ್ಕೆ ಅಡ್ಡಲಾಗಿ ಕೆರೆ ನಿರ್ಮಿಸಲು ಸ್ವಾಧೀನಪಡಿಸಿಕೊಳ್ಳಲಾದ ಮುಷ್ಟ್ರಹಳ್ಳಿ ಗ್ರಾಮದ ಖುಷ್ಕಿ 5–00 ಎಕರೆ ಮತ್ತು ಬೊಗ್ಗಿಲಹಳ್ಳಿ ಗ್ರಾಮದ ಖುಷ್ಕಿ 27–33 ಎಕರೆ ಹಾಗೂ ತರಿ 7–23 ಎಕರೆ ಒಟ್ಟು 40–16 ಎಕರೆ ಜಮೀನುಗಳಿಗೆ ಎಲ್.ಎ.ಸಿ. ಪ್ರಕರಣದಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಮೇಲೆ ಓದಲಾದ ಬೆಂಗಳೂರು ಸಣ್ಣ ನೀರಾವರಿ ದಕ್ಷಿಣ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಮು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 09/03/72
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 20/03/74.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಕೆ.ಜಿ.ಎಫ್ ಸಿವಿಲ್ ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣ ಸಂಖ್ಯೆ:2/79ನ್ನು ದಾಖಲಿಸಿದ್ದು, ಈ ಪ್ರಕರಣದಲ್ಲಿ ಸಿವಿಲ್ ನ್ಯಾಯಾಲಯವು ಪ್ರತಿ ಎಕರೆ ಒಣ ಭೂಮಿಗೆ ರೂ.5,000/–ಗಳಂತೆ ಹಾಗೂ ನೀರಾವರಿ ಜಮೀನಿಗೆ ರೂ.9,000/–ಗಳಂತೆ ಪರಿಹಾರ ಧನವನ್ನು ನಿಗದಿಪಡಿಸಿ

ದಿನಾಂಕ 20/12/83ರಂದು ತೀರ್ಪು ನೀಡಿದೆ. ಈ ತೀರ್ಪಿನ ವಿರುದ್ಧ ಭೂಸ್ವಾಧೀನಾಧಿಕಾರಿಗಳು ಉಚ್ಚ ನ್ಯಾಯಾಲಯದಲ್ಲಿ ಮೇಲ್ಮನವಿ ಸಂಖ್ಯೆ:ಎಂಎಫ್‌ಎ 2056/84ನ್ನು ದಾಖಲಿಸಿದ್ದು, ಮಾನ್ಯ ಉಚ್ಚ ನ್ಯಾಯಾಲಯವು ಸಿವಿಲ್ ನ್ಯಾಯಾಲಯದ ತೀರ್ಪನ್ನು ಎತ್ತಿ ಹಿಡಿದು ಸದರಿ ಪ್ರಕರಣದ ಬಗ್ಗೆ ದಿನಾಂಕ 11/02/2000ರಂದು ನೀಡಿದ ತೀರ್ಪಿನಲ್ಲಿ ಶಾಸನಬದ್ಧ ಸವಲತ್ತುಗಳೊಂದಿಗೆ ಪರಿಹಾರ ನೀಡಲು ಆದೇಶಿಸಿದೆ. ಸದರಿ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಾನೂನು ಇಲಾಖೆಯು ಪತ್ರ ಸಂಖ್ಯೆ:ಲಾ 509 ಎಲ್‌ಎಸ್‌ಪಿ 2000, ದಿನಾಂಕ 21/08/07ರಲ್ಲಿ ಅಭಿಪ್ರಾಯ ನೀಡಿದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 53 ಭೂಸ್ವಾಪ್ರ 2005, ಬೆಂಗಳೂರು, ದಿನಾಂಕ: 11ನೇ ಸೆಪ್ಟೆಂಬರ್ 2009**

ಕೋಲಾರ ಜಿಲ್ಲೆ, ಬಂಗಾರಪೇಟೆ ತಾಲ್ಲೂಕು, ಕಾಮಸಮುದ್ರ ಹೋಬಳಿ, ನಾಯಿಹೊಳೆ ಹಳ್ಳಕ್ಕೆ ಅಡ್ಡಲಾಗಿ ಕೆರೆ ನಿರ್ಮಿಸಲು ಸ್ವಾಧೀನಪಡಿಸಿಕೊಳ್ಳಲಾದ ಮುಷ್ಟ್ರಹಳ್ಳಿ ಗ್ರಾಮದ ಖುಷ್ಕಿ 5–00 ಎಕರೆ ಮತ್ತು ಬೊಗ್ಗಿಲಹಳ್ಳಿ ಗ್ರಾಮದ ಖುಷ್ಕಿ 27–33 ಎಕರೆ ಹಾಗೂ ತರಿ 7–23 ಎಕರೆ ಒಟ್ಟು 40–16 ಎಕರೆ ಜಮೀನುಗಳಿಗೆ ನ್ಯಾಯಾಲಯವು ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ.15,91,961–00ಗಳನ್ನು (ಹದಿನೈದು ಲಕ್ಷದ ತೊಂಭತ್ತೊಂದು ಸಾವಿರದ ಒಂಭೈನೂರ ಅರವತ್ತೊಂದು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2171

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ಆರ್ಥಿಕ ಸಚಿವಾಲಯ**

**ವಿಷಯ:** ಶ್ರೀ ಎನ್.ದೇವಾನಂದಬಾಬು, ವಾಣಿಜ್ಯ ತೆರಿಗೆ ಅಧಿಕಾರಿ, ಇವರ ವಿರುದ್ಧದ ಅಭಿಯೋಜನಾ ಆದೇಶದ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:**
1) ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ:ಲೋಕ್/ಐಎನ್‌ವಿ(ಜಿ)/ಸಿಟಿ/ ಕ್ರೈಂ–29/2005/ ದಿನಾಂಕ:02–08–2008.
2) ತನಿಖಾ ದಾಖಲೆಗಳಾದ ಪ್ರಥಮ ತನಿಖಾ ವರದಿ/ ಶೋಧನಾ ಪಂಚನಾಮೆಗಳು, ಸಾಕ್ಷಿದಾರರ ಹೇಳಿಕೆಗಳು ಮತ್ತು ತನಿಖಾಧಿಕಾರಿಯ ಅಂತಿಮ ವರದಿಯ ಕಡತಗಳು.
3) ಸರ್ಕಾರಿ ಆದೇಶ ಸಂಖ್ಯೆ: ಆಇ 50 ವಾತೆತ 2005, ದಿನಾಂಕ: 29–12–2008.
4) ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ:ಲೋಕ್/ಐಎನ್‌ವಿ(ಜಿ)/ಸಿಟಿ/ ಕ್ರೈಂ–29/2005/ ದಿನಾಂಕ:23–01–2009.

**ಪ್ರಸ್ತಾವನೆ:**

ಶ್ರೀ ಎನ್.ದೇವಾನಂದಬಾಬು, ಪ್ರಸ್ತುತ ವಾಣಿಜ್ಯ ತೆರಿಗೆ ಅಧಿಕಾರಿ, ವಾಣಿಜ್ಯ ತೆರಿಗೆ ಜಂಟಿ ಆಯುಕ್ತರವರ ಕಛೇರಿ, ಕೋರಮಂಗಲ, ಬೆಂಗಳೂರು, ಇವರು ಬಲ್ಲ ಮೂಲಗಳ ಆದಾಯಕ್ಕಿಂತ ಹೆಚ್ಚಿನ ಪ್ರಮಾಣದ ಆಸ್ತಿಯನ್ನು ಹೊಂದಿರುವರೆಂದು ತಿಳಿದು ಬಂದ ವಿಶ್ವಾಸಾರ್ಹ ಮಾಹಿತಿಯನ್ವಯ ಸದರಿ ಆರೋಪಿತರ ವಿರುದ್ಧ ಬೆಂಗಳೂರು ನಗರ ಪೊಲೀಸ್ ಠಾಣೆಯ ಮೊಕದ್ದಮೆ ಸಂಖ್ಯೆ: 29/2005ರ ಪ್ರಕಾರ ದಿನಾಂಕ: 9–8–2005 ರಂದು ಲಂಚ ನಿರೋಧಕ ಕಾಯ್ದೆ 1988 ಕಲಂ 13(1)(ಇ) ಜೊತೆ 13(2)ರ ರೀತ್ಯ ಪ್ರಕರಣವನ್ನು ದಾಖಲಿಸಿಕೊಂಡಿರುತ್ತಾರೆ. ದಾಖಲಿಸಿರುವ ಪ್ರಕರಣದ ಮೇರೆಗೆ ಮೇಲೆ (1) ಮತ್ತು (2) ರಲ್ಲಿ ಓದಲಾದ ತನಿಖಾಧಿಕಾರಿಯ ವರದಿ ಮತ್ತು ತನಿಖಾ ದಾಖಲೆಗಳನ್ನು ಹೆಚ್ಚುವರಿ ಪೊಲೀಸ್ ಮಹಾನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ದಿನಾಂಕ:02–08–2008ರ ಪತ್ರದೊಂದಿಗೆ ಕಳುಹಿಸಿಕೊಟ್ಟು ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಲಾಗಿದೆ:

1) ಪ್ರಥಮ ವರ್ತಮಾನದ ವರದಿ.
2) ಶೋಧನಾ ಪಂಚನಾಮೆಗಳು:
3) ಮನೆ ನಂ.301, 7ನೇ ಮುಖ್ಯರಸ್ತೆ, ಹೆಚ್.ಆರ್.ಬಿ.ಆರ್. ಬಡಾವಣೆ, ಹೆಣ್ಣೂರು ಬಾಣಸವಾಡಿ, ಬೆಂಗಳೂರು ಇಲ್ಲಿ ದಿನಾಂಕ:10–08–2005 ರಂದು ನಡೆಸಲಾದ ಶೋಧನಾ ಪಂಚನಾಮೆ.
4) ಆರೋಪಿತರ ತಂದೆ ಶ್ರೀ ಮುನಿಯಪ್ಪನವರ ವಾಸದ ಮನೆ ಭಾವನ ಹಳ್ಳಿ ಅಂಚೆ, ಮಾಲೂರು ತಾಲ್ಲೂಕು, ಕಸಬಾ ಹೋಬಳಿ, ಕೋಲಾರ ಜಿಲ್ಲೆ ಇಲ್ಲಿ ದಿನಾಂಕ:10–08–2005 ರಂದು ನಡೆಸಲಾದ ಶೋಧನಾ ಪಂಚನಾಮೆ.

ಶ್ರೀ ಎನ್.ದೇವಾನಂದಬಾಬು, ವಾಣಿಜ್ಯ ತೆರಿಗೆ ಅಧಿಕಾರಿ, ಇವರ ವಿರುದ್ಧ ದಾಖಲಾಗಿರುವ ಲೋಕಾಯುಕ್ತ ದಾಳಿ ಪ್ರಕರಣ ಕುರಿತಂತೆ, ಪ್ರಕರಣದ ತನಿಖೆಯನ್ನು ಪೂರ್ಣಗೊಳಿಸಿದ ತನಿಖಾಧಿಕಾರಿಯ ಅಂತಿಮ ವರದಿ ದಿನಾಂಕ:30–7–2008ರ ಪ್ರಕಾರ ಆಪಾದಿತ ಅಧಿಕಾರಿಯಾದ ಶ್ರೀ ದೇವಾನಂದಬಾಬುರವರು ದಿನಾಂಕ: 17–6–1992 ರಿಂದ 10–08–2005 ರವರೆಗಿನ ಪರಿಶೀಲನಾ ಅವಧಿ (ಚೆಕ್ ಪಿರಿಯಡ್) ಯಲ್ಲಿ ಒಟ್ಟು ರೂ.30,69,267–56 ಪೈಸೆಗಳ ಒಟ್ಟು ಆಸ್ತಿಯನ್ನು ಹೊಂದಿರುತ್ತಾರೆಂದು ಮತ್ತು ಈ ಅವಧಿಯಲ್ಲಿ ಆಪಾದಿತರು ತಮ್ಮ ಮತ್ತು ತಮ್ಮ ಕುಟುಂಬದ ಸದಸ್ಯರಿಗಾಗಿ ಮಾಡಿರುವ ಒಟ್ಟು ಖರ್ಚು ರೂ.53,69,552–28 ಪೈಸೆಗಳಾಗಿದ್ದು, ಆಪಾದಿತರು ಈ ಅವಧಿಯಲ್ಲಿ ಎಲ್ಲಾ ಬಲ್ಲ ಮೂಲಗಳಿಂದ ಗಳಿಸಿರುವ ಆದಾಯವು ಒಟ್ಟು ರೂ.18,37,891–42 ಪೈಸೆಗಳಾಗಿರುತ್ತದೆ. ಆಪಾದಿತ ಆಸ್ತಿಯ ಮತ್ತು ಖರ್ಚಿನ ಒಟ್ಟು ಮೊತ್ತ ರೂ.84,38,819–84 ಪೈಸೆಗಳಾಗಿದ್ದು, ಹೆಚ್ಚಿನ ಪ್ರಮಾಣದ ಆಸ್ತಿಯ ಒಟ್ಟು ಮೊತ್ತವು ರೂ.55,80,928–42 ಪೈಸೆಗಳಾಗುತ್ತವೆ. ಅಂದರೆ ಆಪಾದಿತ ಅಧಿಕಾರಿ ತಮ್ಮ ಎಲ್ಲಾ ಬಲ್ಲ ಮೂಲಗಳ ಆದಾಯಕ್ಕಿಂತಲೂ ಶೇ.195.28 ರಷ್ಟು ಹೆಚ್ಚಿನ ಪ್ರಮಾಣದ ಆಸ್ತಿಯನ್ನು ಹೊಂದಿರುವುದು ಕಂಡುಬರುತ್ತದೆ. ಈ ಹೆಚ್ಚಿನ ಆಸ್ತಿಯ ಬಗ್ಗೆ ಆರೋಪಿತರು ಯಾವುದೇ ತೃಪ್ತಿಕರ ವಿವರಣೆ ಅಥವಾ ಲೆಕ್ಕವನ್ನು ನೀಡಿರುವುದಿಲ್ಲ. ಈ ರೀತಿಯ ಆರೋಪಿಯು ಲಂಚ ನಿರೋಧ ಕಾಯ್ದೆ 1988ರ ಕಲಂ 13(1)(ಇ) ಜೊತೆಯಲ್ಲಿ ಓದಲಾದ 13(2)ರ ಅಡಿಯಲ್ಲಿ ಎಸಗಿರುವ ಶಿಕ್ಷಾರ್ಹ ಅಪರಾಧವು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಆಪಾದಿತರು ಸಾರ್ವಜನಿಕ ಹಿತದೃಷ್ಟಿಯಿಂದ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಪಡಲು ಅರ್ಹರಾಗಿರುತ್ತಾರೆ. ಅವರನ್ನು ಅಭಿಯೋಜನೆಗೆ ಒಳಪಡಿಸಲು ಸಕ್ಷಮ ಪ್ರಾಧಿಕಾರದ ಅರ್ಥಾತ್ ಸದರಿ ಆಪಾದಿತ ಅಧಿಕಾರಿಯನ್ನು ತನ್ನ ಹುದ್ದೆಯಿಂದ ತೆಗೆದುಹಾಕುವ ಅಧಿಕಾರವುಳ್ಳ ಪ್ರಾಧಿಕಾರದ ಪೂರ್ವಾನುಮತಿ ಅತ್ಯಗತ್ಯವಾಗಿರುತ್ತದೆ ಎಂದು ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ತಿಳಿಸಿರುತ್ತಾರೆ.

ಆದ್ದರಿಂದ ಶ್ರೀ ಎನ್.ದೇವಾನಂದಬಾಬು, ವಾಣಿಜ್ಯ ತೆರಿಗೆ ಅಧಿಕಾರಿ, ಇವರನ್ನು ಲಂಚ ನಿರೋಧ ಕಾಯ್ದೆ 1988ರ ಕಲಂ 13(1)(ಇ) ಜೊತೆಯಲ್ಲಿ ಓದಲಾದ ಕಲಂ 13(2)ರ ಅಡಿಯಲ್ಲಿ ಎಸಗಿರುವ ಅಪರಾಧಕ್ಕಾಗಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧ ಕಾಯ್ದೆ 1988ರ ಕಲಂ 19(1)(ಬಿ) ರನ್ವಯ ಮಂಜೂರಾತಿ ಆದೇಶವನ್ನು ನೀಡುವಂತೆ ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತರವರು ಕೋರಿರುತ್ತಾರೆ. ಅದರಂತೆ, ಮೇಲೆ ಓದಲಾಗಿರುವ ಕ್ರಮ ಸಂಖ್ಯೆ: (3)ರ ಸರ್ಕಾರಿ ಆದೇಶ ದಿನಾಂಕ: 29–12–2008 ರಲ್ಲಿ ಅಭಿಯೋಜನಾ ಮಂಜೂರಾತಿ ಆದೇಶವನ್ನು ನೀಡಲಾಗಿದೆ.

ಮೇಲೆ ಓದಲಾಗಿರುವ ಕ್ರಮ ಸಂಖ್ಯೆ: (4)ರ ಪತ್ರದಲ್ಲಿ ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತರವರು ಸರ್ಕಾರ ಹೊರಡಿಸಿರುವ ಆದೇಶದಲ್ಲಿ ಈ ಕೆಳಕಂಡ ನ್ಯೂನತೆಗಳು ಕಂಡುಬಂದಿದ್ದು, ಅವುಗಳನ್ನು ಸರಿಪಡಿಸಿ, ಪರಿಷ್ಕೃತ ಆದೇಶವನ್ನು ನೀಡುವಂತೆ ಕೋರಿರುತ್ತಾರೆ:

1) ಅಭಿಯೋಜನಾ ಮಂಜೂರಾತಿ ಆದೇಶ ಪುಟ ಸಂಖ್ಯೆ:(5)ರ "ಆದಾಯದ ವಿವರ" ಭಾಗದಲ್ಲಿ ಕ್ರಮ ಸಂಖ್ಯೆ: (4) ರಲ್ಲಿ ಆರೋಪಿತ ಅಧಿಕಾರಿಯವರ ತಂದೆ ಪಡೆದಿರುವ ಪರಿಹಾರ ರೂ.2,20,000/– ಗಳೆಂದು ತೋರಿಸಿರುವುದನ್ನು ಕೈಬಿಡುವುದು ಸೂಕ್ತ, ಕಾರಣ ಸದರಿ ಪರಿಹಾರದ ಮೊಬಲಗು ರೂ.2,10,000/– ಗಳಾಗಿದ್ದು, ಅದನ್ನು ಪ್ರಕರಣದ ಅಂತಿಮ ವರದಿಯ (ಬುಕ್ ಸಂಖ್ಯೆ:1) ಪುಟ ಸಂಖ್ಯೆ:47ರ ಕ್ರಮ ಸಂಖ್ಯೆ: 29–4–ಸಿ ಯಲ್ಲಿ ತಿಳಿಸಿರುವಂತೆ ರೂ.2,10,000/– ಗಳನ್ನು ಆರೋಪಿತರ ಆದಾಯವೆಂದು ಪರಿಗಣಿಸಲಾಗಿರುವುದಿಲ್ಲ. ಅದೇ ರೀತಿ, "ಆದಾಯದ ವಿವರ" ಭಾಗದಲ್ಲಿ ಕ್ರಮ ಸಂಖ್ಯೆ:11 ರಲ್ಲಿ ಆರೋಪಿತ ಅಧಿಕಾರಿಯವರ ತಂದೆ ವಿಜಯ ಬ್ಯಾಂಕಿನಿಂದ ಪಡೆದಿರುವ ಸಾಲ ರೂ.8,00,000–00 ಲಕ್ಷಗಳೆಂದು ತೋರಿಸಿರುವುದನ್ನು ಸಹ ಕೈಬಿಡುವುದು ಸೂಕ್ತ, ಕಾರಣ ಈ ಮೊಬಲಗನ್ನು ಪ್ರಕರಣದ ಅಂತಿಮ ವರದಿಯ (ಬುಕ್ ಸಂಖ್ಯೆ:1) ಪುಟ ಸಂಖ್ಯೆ: 48ರ ಕ್ರಮ ಸಂಖ್ಯೆ: 29–5–ಸಿ ಯಲ್ಲಿ ತಿಳಿಸಿರುವಂತೆ ಆರೋಪಿತರ ಆದಾಯವೆಂದು ಪರಿಗಣಿಸಲಾಗಿರುವುದಿಲ್ಲ.

2) ಅಭಿಯೋಜನಾ ಮಂಜೂರಾತಿ ಆದೇಶ ಪುಟ ಸಂಖ್ಯೆ: 9ರ ಮೊದಲನೇ ಸಾಲಿನಲ್ಲಿ "ಲಂಚ ನಿರೋಧಕ ಕಾಯ್ದೆ – 1988ರ ಕಲಂ 19(1)(ಸಿ)" ಎಂದು ನಮೂದಾಗಿರುವುದನ್ನು "ಲಂಚ ನಿರೋಧಕ ಕಾಯ್ದೆ – 1988ರ ಕಲಂ 19(1)(ಬಿ)" ಎಂದು ನಮೂದಿಸುವುದು ಸೂಕ್ತ ಹಾಗೂ ಅದೇ ಪುಟದ ಆದೇಶ ಭಾಗದಲ್ಲಿ ಕಛೇರಿಯ ಮೊಹರನ್ನು ಹಾಕುವುದು ಅವಶ್ಯಕವೆಂದು ತಿಳಿಸಿರುತ್ತಾರೆ.

ಮೇಲೆ ಓದಲಾಗಿರುವ ಕ್ರಮ ಸಂಖ್ಯೆ: (3)ರ ಸರ್ಕಾರದ ಆದೇಶದಲ್ಲಿ ಈ ಅಧಿಕಾರಿಯನ್ನು ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿಯನ್ನು ನೀಡಲಾಗಿತ್ತು. ಆದರೆ ತದನಂತರದ ಬೆಳವಣಿಗೆಯ ಹಿನ್ನೆಲೆಯಲ್ಲಿ ಪ್ರಕರಣವನ್ನು ಮತ್ತೊಮ್ಮೆ ಪರಿಶೀಲಿಸಲಾಗಿದೆ.

ತನಿಖೆಯು ಪೂರ್ಣಗೊಂಡ ನಂತರ ಆಪಾದಿತರ ವಶದಲ್ಲಿದ್ದ ಒಟ್ಟು ಆಸ್ತಿ ಆದಾಯದ ವಿವರಗಳು ಈ ಕೆಳಗಿನಂತೆ ಇರುವುದೆಂದು ತನಿಖಾಧಿಕಾರಿಯು ಅಂತಿಮ ವರದಿಯಲ್ಲಿ ತಿಳಿಸಿರುತ್ತಾರೆ.

**ಆಪಾದಿತರ ಮತ್ತು ಅವರ ಕುಟುಂಬದ ಸದಸ್ಯರ ಹೆಸರಿನಲ್ಲಿರುವ ಆಸ್ತಿಗಳ ಸಂಕ್ಷಿಪ್ತ ವಿವರಗಳು ಮತ್ತು ಮೌಲ್ಯದ ಪಟ್ಟಿ:**

| ಕ್ರ. ಸಂ. | ಆಸ್ತಿಗಳ ವಿವರಗಳು | ಮೌಲ್ಯ |
|---|---|---|
| 1) | ಭಾವನ ಹಳ್ಳಿ, ಸರ್ವೇ ನಂ.139 ರಲ್ಲಿ 7 ಎಕರೆ 38 ಗುಂಟೆ ಜಮೀನು | – |
| 2) | ಭಾವನ ಹಳ್ಳಿ, ಸರ್ವೇ ನಂ.183 ರಲ್ಲಿ 3 ಎಕರೆ 24 ಗುಂಟೆ ಜಮೀನು | – |
| 3) | ಭಾವನ ಹಳ್ಳಿ, ಸರ್ವೇ ನಂ.180/6 ರಲ್ಲಿ 3 ಎಕರೆ 26 ಗುಂಟೆ ಜಮೀನು | – |
| 4) | ಭಾವನ ಹಳ್ಳಿ, ಸರ್ವೇ ನಂ.207 ರಲ್ಲಿ 1 ಎಕರೆ 14 ಗುಂಟೆ ಜಮೀನು | – |
| 5) | ಭಾವನ ಹಳ್ಳಿ, ಸರ್ವೇ ನಂ.208/3 ರಲ್ಲಿ 14 ಗುಂಟೆ ಜಮೀನು | – |
| 6) | ಭಾವನ ಹಳ್ಳಿ, ಸರ್ವೇ ನಂ.209/4 ರಲ್ಲಿ 26 ಗುಂಟೆ ಜಮೀನು | – |
| 7) | ಭಾವನ ಹಳ್ಳಿ, ಸರ್ವೇ ನಂ.233/1 ರಲ್ಲಿ 4 ಎಕರೆ 17 ಗುಂಟೆ ಜಮೀನು | – |
| 8) | ಭಾವನ ಹಳ್ಳಿ, ಸರ್ವೇ ನಂ.181 ರಲ್ಲಿ 1 ಎಕರೆ 19 ಗುಂಟೆ ಜಮೀನು | – |
| 9) | ಭಾವನ ಹಳ್ಳಿ, ಸರ್ವೇ ನಂ.182 ರಲ್ಲಿ 2 ಎಕರೆ ಜಮೀನು | – |
| 10) | ಭಾವನ ಹಳ್ಳಿ, ಸರ್ವೇ ನಂ.167 ರಲ್ಲಿ 2 ಎಕರೆ 30 ಗುಂಟೆ ಜಮೀನು | – |
| 11) | ನಿವೇಶನ ಸಂಖ್ಯೆ:10, ಸರ್ವೇ ನಂ.93/2, ಜಾರಕ್‌ಬಂಡೆ ಕಾವಲ್, ಬೆಂಗಳೂರು | – |
| 12) | ಭಾವನ ಹಳ್ಳಿ, ಸರ್ವೇ ನಂ.239 ರಲ್ಲಿ 15 ಎಕರೆ 31 ಗುಂಟೆ ಜಮೀನು. | ರೂ. 1,30,000–00 |
| 13) | ನಿವೇಶ ಸಂಖ್ಯೆ: 301, 7ನೇ ಮುಖ್ಯರಸ್ತೆ, ಕಲ್ಯಾಣ ನಗರ, ಬಾಣಸವಾಡಿ, ಬೆಂಗಳೂರು. | ರೂ. 5,56,345–00 |
| 14) | 40x60 ಅಳತೆಯ ನಿವೇಶನ ಸಂಖ್ಯೆ: 182, ಖಾತಾ ನಂ.192, ವೈಟ್ ಗಾರ್ಡನ್, ಮಾಲೂರು ಟೌನ್,<br>(ಆರೋಪಿತ ಅಧಿಕಾರಿಯವರ ಮಗಳು ಶ್ರೀಮತಿ ಎನ್.ಡಿ.ಆಶಾ ಕಿರಣ್‌ರವರ ಹೆಸರಿನಲ್ಲಿ) | ರೂ. 72,000–00 |
| 15) | 40x29 ಅಳತೆಯ ನಿವೇಶನ ಸಂಖ್ಯೆ: 5965, ರಾಜೇಂದ್ರ ಲೇಔಟ್, ಮಾಲೂರು<br>(ಆರೋಪಿತ ಅಧಿಕಾರಿಯವರ ನಾದಿನಿ ಶ್ರೀಮತಿ ಉಮಾದೇವಿಯವರ ಹೆಸರಿನಲ್ಲಿ) | – |
| 16) | ಬಿ.ಡಿ.ಎ.ನಿವೇಶನ ಸಂಖ್ಯೆ: 616, ನಂದಿನಿ ಲೇಔಟ್, ಲಗ್ಗೆರೆ, ಬೆಂಗಳೂರು | ರೂ. 19,033–00 |
| 17) | ಸರ್ವೇ ನಂ.62 ಭಾವನ ಹಳ್ಳಿ, 6 ಎಕರೆ 22 ಗುಂಟೆ ಜಮೀನು | ರೂ. 4,75,00–00 |
| 18) | ರಿಜಿಸ್ಟ್ರೇಷನ್ ಸಂಖ್ಯೆ: ಕೆಎ04–ಎನ್3396 ಜೆನ್ ಕಾರು<br>(ಆರೋಪಿತ ಅಧಿಕಾರಿಯ ಹೆಸರಿನಲ್ಲಿ) | – |
| 19) | ಹೀರೋ ಹೋಂಡ ಮೋಟಾರ್ ಸೈಕಲ್ ರಿಜಿಸ್ಟೇಷನ್ ಸಂಖ್ಯೆ: : ಕೆಎ03–ಇಡಿ –7506 | ರೂ.59,800–00 |
| 20) | ಗೆಟ್ಜ್ ಕಾರು ರಿಜಿಸ್ಟೇಷನ್ ಸಂಖ್ಯೆ: : ಕೆಎ03–ಎಂಜಿ–1242 | ರೂ.5,51,803–00 |
| 21) | ಮಾರುತಿ ಕಾರ್ ರಿಜಿಸ್ಟೇಷನ್ ಸಂಖ್ಯೆ: : ಕೆಎ4–ಎನ್–1242 | – |
| 22) | 562 ಗ್ರಾಂ ಮತ್ತು 900 ಮಿಲಿ ಗ್ರಾಂ ಚಿನ್ನದ ಒಡವೆ ಮತ್ತು 7 ಕೆ.ಜಿ. 678 ಗ್ರಾಂ ಬೆಳ್ಳಿಯ ವಸ್ತುಗಳು ಹಾಗೂ ಇತರೇ ಗೃಹೋಪಯೋಗಿ ವಸ್ತುಗಳು | ರೂ. 7,82,359–00 |
| 23) | ಶೋಧನಾ ಕಾಲದಲ್ಲಿ ದೊರೆತ ನಗದು ಹಣ | ರೂ.32,000–00 |
| 24) | ಶ್ರೀ ಎನ್.ಡಿ.ವೆಂಕಟೇಶ್‌ಬಾಬು ರವರ ಹೆಚ್.ಡಿ.ಎಫ್.ಸಿ. ಬ್ಯಾಂಕ್, ಕಮ್ಮನಹಳ್ಳಿ, ಉಳಿತಾಯ ಖಾತೆ | ರೂ. 19.84 |

| ಕ್ರ ಸಂ. | ಆಸ್ತಿಗಳ ವಿವರಗಳು | ಮೌಲ್ಯ |
|---|---|---|
| 25) | ಶ್ರೀ ಟಿ.ಮುನಿಯಪ್ಪರವರ ಉಳಿತಾಯ ಖಾತೆ ಸಂಖ್ಯೆ:4182 ಕೆನರಾಬ್ಯಾಂಕ್, ಕಲ್ಯಾಣನಗರ. | – |
| 26) | ಆರೋಪಿತ ಅಧಿಕಾರಿಯವರ ಉಳಿತಾಯ ಖಾತೆ ಸಂಖ್ಯೆ:000019738 ಕೆನರಾ ಬ್ಯಾಂಕ್, ಮೆಜೆಸ್ಟಿಕ್ ಶಾಖೆ. | – |
| 27) | ಶ್ರೀ ಟಿ.ಮುನಿಯಪ್ಪ ಮತ್ತು ಆರೋಪಿತ ಅಧಿಕಾರಿಯವರ ಜಂಟಿ ಖಾತೆ ಸಂಖ್ಯೆ:3201 ವಿಜಯಾ ಬ್ಯಾಂಕ್, ಚಿಕ್ಕಕುಂತೂರು ಶಾಖೆ | ರೂ. 2,162–00 |
| 28) | ಆರೋಪಿತ ಅಧಿಕಾರಿಯವರ ಉಳಿತಾಯ ಖಾತೆ ಸಂಖ್ಯೆ: 1302, ಕೆನರಾ ಬ್ಯಾಂಕ್ ಕಲ್ಯಾಣ ನಗರ. | 839–60 |
| 29) | ಆರೋಪಿತ ಅಧಿಕಾರಿಯವರ ಪತ್ನಿಯ ಉಳಿತಾಯ ಖಾತೆ ಸಂಖ್ಯೆ: 1296, ಕೆನರಾ ಬ್ಯಾಂಕ್ ಕಲ್ಯಾಣ ನಗರ ಶಾಖೆ. | 163–00 |
| 30) | ಶ್ರೀ ವೇಮನ ಸೌಹಾರ್ದ ಪತ್ತಿನ ಸಹಕಾರ ಸಂಘ ಲಿ. ಬೆಂಗಳೂರು, ಇದರಲ್ಲಿನ ಷೇರುಗಳು (ಆರೋಪಿತ ಅಧಿಕಾರಿಯ ಹೆಸರಿನಲ್ಲಿ) | ರೂ. 5,000–00 |
| 31) | ಶ್ರೀ ವೇಮನ ಸೌಹಾರ್ದ ಪತ್ತಿನ ಸಹಕಾರ ಸಂಘ ಲಿ. ಬೆಂಗಳೂರು, ಇದರಲ್ಲಿನ ಷೇರುಗಳು (ಆರೋಪಿತ ಅಧಿಕಾರಿಯವರ ಪತ್ನಿಯ ಹೆಸರಿನಲ್ಲಿ) | ರೂ. 2,000–00 |
| 32) | ಮಹರ್ಷಿ ವಾಲ್ಮೀಕಿ ಗಿರಿಜನ ಪತ್ತಿನ ಸಹಕಾರ ಸಂಘ ನಿಯಮಿತ – ಷೇರುಗಳು (ಆರೋಪಿತ ಅಧಿಕಾರಿಯ ಹೆಸರಿನಲ್ಲಿ) | ರೂ. 2,500–00 |
| 33) | ಮಹರ್ಷಿ ವಾಲ್ಮೀಕಿ ಗಿರಿಜನ ಪತ್ತಿನ ಸಹಕಾರ ಸಂಘ ನಿಯಮಿತ – ಷೇರುಗಳು (ಆರೋಪಿತ ಅಧಿಕಾರಿಯವರ ಪತ್ನಿಯ ಹೆಸರಿನಲ್ಲಿ) | ರೂ. 2,500–00 |
| 34) | ಆರೋಪಿತ ಅಧಿಕಾರಿಯವರ ತಂದೆ ಶ್ರೀ ಟಿ.ಮುನಿಯಪ್ಪ, – ಇಂಡಿಯಾನ ಜಿಮ್‌ಖಾನಾ ಕ್ಲಬ್, ಕಾಕ್ಸ್‌ಟೌನ್, ಬೆಂಗಳೂರು. ಇವರ ಸದಸ್ಯರಾಗಿರುತ್ತಾರೆ. | – |
| 35) | ಕರ್ನಾಟಕ ಕಮರ್ಷಿಯಲ್ ಟ್ಯಾಕ್ಸ್ ಅಧಿಕಾರಿಗಳ ಸೇವಾ ಸಂಘ ಇದರ ಅಜೀವ ಸದಸ್ಯರು – ಆರೋಪಿತ ಅಧಿಕಾರಿ | – |
| 36) | ಆರೋಪಿತ ಅಧಿಕಾರಿಯವರು ಕಾಸ್ಮ ಪಾಲಿಟನ್ ಕ್ಲಬ್, ಕಲ್ಯಾಣ ನಗರ – ಇದರ ಸದಸ್ಯರಾಗಿರುತ್ತಾರೆ. | – |
| 37 | ಕೈನೆಟಿಕ್ ಹೋಂಡ ರಿಜಿಸ್ಟ್ರೇಷನ್ ಸಂಖ್ಯೆ: :ಕೆಎ03–ಇಬಿ–3329 | ರೂ. 33,865–00 |
| 38) | ಮಹೇಂದ್ರ & ಮಹೇಂದ್ರ ಟ್ರಾಕ್ಟರ್ 475 ಡಿ1 – ಇದರ ಖರೀದಿ | ರೂ.3,32,305–00 |
| 39) | ಆರೋಪಿತ ಅಧಿಕಾರಿಯವರ ತಂದೆ ಶ್ರೀ ಟಿ.ಮುನಿಯಪ್ಪ, ಇವರ ಹೆಸರಿನಲ್ಲಿ ಉಳಿತಾಯ ಖಾತೆ ಸಂಖ್ಯೆ: 15783– ಬ್ಯಾಂಕ್ ಆಫ್ ಇಂಡಿಯಾ ಕೆ.ಜಿ.ರಸ್ತೆ ಶಾಖೆ, ಬೆಂಗಳೂರು | – |
| 40) | ಶ್ರೀ ಎನ್.ಡಿ.ಶ್ರೀಧರಬಾಬು, ಉಳಿತಾಯ ಖಾತೆ ನಂ.01190025150 | 556–82 |
| 41) | ಶ್ರೀ ಎನ್.ಡಿ.ಶ್ರೀಧರಬಾಬು, ಉಳಿತಾಯ ಖಾತೆ ನಂ.38139 ಕೆನರಾ ಬ್ಯಾಂಕ್ ಫ್ರೇಜರ್‌ಟೌನ್ ಶಾಖೆ | 9.00 |
| 42) | ಶ್ರೀ ಎನ್.ಡಿ.ವೆಂಕಟೇಶ್‌ಬಾಬುರವರ ಉಳಿತಾಯ ಖಾತೆ ಸಂಖ್ಯೆ: 01190025584 ಎಸ್.ಬಿ.ಐ. ಬ್ಯಾಂಕ್, ಬಾಣಸವಾಡಿ ಶಾಖೆ | 7.35 |
| 43) | ಆರೋಪಿತ ಅಧಿಕಾರಿಯವರ ಸ್ವಗ್ರಾಮ ಭಾವನಹಳ್ಳಿ ಮನೆಯಲ್ಲಿ ಕಂಡುಬಂದಿರುವ ಗೃಹೋಪಯೋಗಿ ವಸ್ತುಗಳು | – |
| 44) | ಎಲೆಕ್ಟ್ರಿಸಿಟಿ ಡೆಪಾಸಿಟ್ – ಮನೆ ನಂ.301, 7ನೇ ಮುಖ್ಯರಸ್ತೆ, 80 ಅಡಿ ರಸ್ತೆ, ಕಲ್ಯಾಣ ನಗರ, ಹೆಚ್.ಆರ್.ಬಿ.ಆರ್. ಲೇಔಟ್, ಬೆಂಗಳೂರು. | – |

| ಕ್ರ. ಸಂ. | ಆಸ್ತಿಗಳ ವಿವರಗಳು | ಮೌಲ್ಯ |
|---|---|---|
| 45) | ವಾಟರ್ ಸಪ್ಲೈ ಡೆಪಾಸಿಟ್ – ಮನೆ ನಂ.301, 7ನೇ ಮುಖ್ಯರಸ್ತೆ, 80 ಅಡಿ ರಸ್ತೆ | – |
| 46) | ಅಡಿಗೆ ಅನಿಲ ಸಂಪರ್ಕ | ರೂ.1,900–00 |
| 47) | ಬಿ.ಎಸ್.ಎನ್.ಎಲ್. ದೂರವಾಣಿ ಸಂಪರ್ಕ ಡಿಪಾಸಿಟ್ | – |
| | **ಒಟ್ಟು ಮೊತ್ತ** | **ರೂ.30,69,267–56** |

**ಖರ್ಚು ವೆಚ್ಚ ವಿವರಗಳು**

| ಕ್ರ. ಸಂ. | ಆಸ್ತಿಯ ವಿವರಗಳು | ಮೌಲ್ಯ ರೂಪಾಯಿಗಳಲ್ಲಿ |
|---|---|---|
| 1) | ಕೌಟುಂಬಿಕ ವೆಚ್ಚ | 4,96,361–00 |
| 2) | ಟಿ.ಎ.ಸಿ.ಮೌಲ್ಯ ಮಾಪನ | 30.07,000–00 |
| 3) | ನಿವೇಶನ ಸಂಖ್ಯೆ: 10 ಸರ್ವೇ ನಂ.93/2, ಜಾರಕ್‌ಬಂಡೆ ಕಾವಲ್, ಇದರ ನೋಂದಣಿ ಮತ್ತು ಸ್ಟ್ಯಾಂಪ್ ಶುಲ್ಕ | – |
| 4) | ಭಾವನ ಹಳ್ಳಿ, ಸರ್ವೇ ನಂ.239 ರಲ್ಲಿ 15 ಎಕರೆ 31 ಗುಂಟೆ ಜಮೀನು ನೋಂದಣಿ | 20,884–00 |
| 5) | ನಿವೇಶ ಸಂಖ್ಯೆ: 301, 7ನೇ ಮುಖ್ಯರಸ್ತೆ, ಕಲ್ಯಾಣ ನಗರ, ಬಾಣಸವಾಡಿ ಇದರ ನೋಂದಣಿ ಮತ್ತು ಸ್ಟ್ಯಾಂಪ್ ಶುಲ್ಕ | 1,22,315–00 |
| 6) | ಬಿ.ಡಿ.ಎ.ನಿವೇಶನ ಸಂಖ್ಯೆ: 616, ನಂದಿನಿ ಲೇಔಟ್, ಲಗ್ಗೆರೆ, ಬೆಂಗಳೂರು ಇದರ ನೋಂದಣಿ ಮತ್ತು ಸ್ಟ್ಯಾಂಪ್ ಶುಲ್ಕ | 2,500–00 |
| 7) | ನಿವೇಶನ ಸಂಖ್ಯೆ: 182, ಖಾತಾ ನಂ.192, ವೈಟ್ ಗಾರ್ಡನ್, ಮಾಲೂರು ಟೌನ್, ಇದರ ನೋಂದಣಿ ಮತ್ತು ಸ್ಟ್ಯಾಂಪ್ ಶುಲ್ಕ | 7,265–00 |
| 8) | ಸರ್ವೇ ನಂ.62 ಭಾವನ ಹಳ್ಳಿ, 6 ಎಕರೆ 22 ಗುಂಟೆ ಜಮೀನು ಇದರ ನೋಂದಣಿ ಮತ್ತು ಸ್ಟ್ಯಾಂಪ್ ಶುಲ್ಕ | 73,687–00 |
| 9) | ನಿವೇಶ ಸಂಖ್ಯೆ: 301, 7ನೇ ಮುಖ್ಯರಸ್ತೆ, ಕಲ್ಯಾಣ ನಗರ, ಇದರ ತೆರಿಗೆ ಪಾವತಿ | 29,421–00 |
| 10) | ಬಿ.ಡಿ.ಎ.ನಿವೇಶನ ಸಂಖ್ಯೆ: 616, ನಂದಿನಿ ಲೇಔಟ್, ಲಗ್ಗೆರೆ, ಬೆಂಗಳೂರು ಇದರ ತೆರಿಗೆ ಪಾವತಿ | 1,738–00 |
| 11) | ಮನೆ ನಂ–301ಕ್ಕೆ ನೀರು ಸರಬರಾಜು ವೆಚ್ಚ | 36,634–00 |
| 12) | ಮನೆ ನಂ.301, 7ನೇ ಮುಖ್ಯರಸ್ತೆ, 80 ಅಡಿ ರಸ್ತೆ, ಕಲ್ಯಾಣ ನಗರ, ಹೆಚ್.ಆರ್.ಬಿ.ಆರ್. ಲೇಔಟ್, ಇದರ ವಿದ್ಯುತ್ ಶುಲ್ಕ ಪಾವತಿ | 1,00,191–00 |
| 13) | ಅಡಿಗೆ ಅನಿಲ ಉಪಯೋಗ | 17,840/– |
| 14) | ಮನೆ ನಂ.301ಕ್ಕೆ ಕೇಬಲ್ ಮತ್ತು ಟಿ.ವಿ. ಸಂಪರ್ಕ | 1,525–00 |
| 15) | ದಿನಪತ್ರಿಕೆಗಳ ವೆಚ್ಚ | 6,300–00 |
| 16) | ಟೆಲಿಫೋನ್ ಸಂಪರ್ಕ ವೆಚ್ಚ | 1,60,340–00 |
| 17) | ಮನೆ ನಂ.612ರ ಬಾಡಿಗೆ | 1,05,600–00 |
| 18) | ವೈದ್ಯಕೀಯ ವೆಚ್ಚ | 47,078–28 |
| 19) | ಐ.ಸಿ.ಐ.ಸಿ.ಐ ಬ್ಯಾಂಕ್‌ಗೆ ಸಾಲ ಮರುಪಾವತಿ | 9,439–00 |
| 20) | ಜಿಪಿಎಫ್ ಸಾಲ ಮರುಪಾವತಿ | 14,000–00 |
| 21) | ಎಂ ಅಂಡ್ ಎಂ ಹಣಕಾಸು ಸಂಸ್ಥೆಯ ಸಾಲ ಮರುಪಾವತಿ | 3,72,350–00 |
| 22) | ಹೀರೋ ಹೋಂಡ ಕೆಎ03–ಇಡಿ 7506 ಇದರ ವೆಚ್ಚ | 25,040–00 |

| ಕ್ರ ಸಂ. | ಆಸ್ತಿಯ ವಿವರಗಳು | ಮೌಲ್ಯ ರೂಪಾಯಿಗಳಲ್ಲಿ |
|---|---|---|
| 23) | ಗೆಟ್ಜ್ ಕಾರು ರಿಜಿಸ್ಟ್ರೇಷನ್ ಸಂಖ್ಯೆ: : ಕೆಎ03–ಎಂಜಿ–1242 ಇದರ ವೆಚ್ಚ | 71,000–00 |
| 24) | ಮಾರುತಿ ಕಾರ್ ರಿಜಿಸ್ಟ್ರೇಷನ್ ಸಂಖ್ಯೆ: : ಕೆಎ4–ಎನ್–1242 ಇದರ ವೆಚ್ಚ | 2,75,850–00 |
| 25) | ಕೆನೆಟಿಕ್ ಹೋಂಡ ರಿಜಿಸ್ಟ್ರೇಷನ್ ಸಂಖ್ಯೆ: :ಕೆಎ03–ಇಬಿ–3329 ಇದರ ವೆಚ್ಚ | 27,376–00 |
| 26) | ಮಕ್ಕಳ ವಿದ್ಯಾಭ್ಯಾಸದ ಖರ್ಚು | 1,44,885–00 |
| 27) | ಮಕ್ಕಳ ಮದುವೆ ಖರ್ಚು | 6,670–00 |
| 28) | ಇಂಡಿಯನ್ ಜಮಾಖಾನ ಸದಸ್ಯತ್ವ | 12,500–00 |
| 29) | ಆರೋಪಿತ ಅಧಿಕಾರಿಯವರು ಕಾಸ್ಮ ಪಾಲಿಟಿನ್ ಕ್ಲಬ್, ಕಲ್ಯಾಣ ನಗರ ಇದರ ಸದಸ್ಯತ್ವ | 10,000–00 |
| 30) | ಕರ್ನಾಟಕ ಕಮರ್ಷಿಯಲ್ ಟ್ಯಾಕ್ಸ್ ಅಧಿಕಾರಿಗಳ ಸೇವಾ ಸಂಘದ ಸದಸ್ಯತ್ವ | 1,010–00 |
| 31) | ಮನೆ ಕೆಲಸದವರ ವೆಚ್ಚ | 16,850/– |
| 32) | ಸಾಕು ನಾಯಿಯ ನಿರ್ವಹಣೆ ಮತ್ತು ವೆಚ್ಚ | 1,35,480–00 |
| 33) | ದೇವಸ್ಥಾನ ಮತ್ತು ಸಂಸ್ಥೆಗಳಿಗೆ ಆರೋಪಿತ ಅಧಿಕಾರಿಯಿಂದ ನೀಡಿರುವ ದಾನ ಅಥವಾ ಕೊಡುಗೆ | – |
| 34) | ಮಗಳ ಹೆರಿಗೆಗಾಗಿ ಯಾವುದೇ ವೆಚ್ಚವನ್ನು ಮಾಡಿರುವುದಿಲ್ಲ. | – |
| 35) | ಕ್ರೆಡಿಟ್ ಮತ್ತು ಡೆಬಿಟ್ ಕಾರ್ಡ್‌ಗಳ ವೆಚ್ಚ | – |
| 36) | ಪಾಸ್‌ಪೋರ್ಟ್ ವೆಚ್ಚ | – |
| 37) | ಆರೋಪಿತ ಅಧಿಕಾರಿ ಹಾಗೂ ಅವರ ಕುಟುಂಬ ವರ್ಗದವರ ಪ್ರವಾಸ | – |
| 38) | ಆರೋಪಿತ ಅಧಿಕಾರಿಯವರು ಪಾವತಿಸಿರುವ ಆದಾಯ ತೆರಿಗೆ | 4,803–00 |
| 39) | ರಾಷ್ಟ್ರೀಯ ಉಳಿತಾಯ ಪ್ರಮಾಣ ಪತ್ರಗಳ ಖರೀದಿ | 2,900–00 |
| 40) | ಸತ್ಯನಾರಾಯಣಸ್ವಾಮಿ ಪೂಜೆ | 2,750–00 |
| | **ಒಟ್ಟು ವೆಚ್ಚ** | **53,69,552–28** |

**ಆದಾಯದ ವಿವರ**

| ಕ್ರ ಸಂ. | ಆದಾಯದ ವಿವರಗಳು | ಮೌಲ್ಯ ರೂಪಾಯಿ |
|---|---|---|
| 1) | ಆರೋಪಿತ ಅಧಿಕಾರಿಯವರ ವೇತನದಿಂದ ಬಂದ ಆದಾಯ | 10,11,203–00 |
| 2) | ಕೃಷಿ ಆದಾಯ | 8,46,800–00 |
| 3) | ಕಟ್ಟಡ ಬಾಡಿಗೆ | 44,000–00 |
| 4) | ನಿವೇಶನ ಸಂಖ್ಯೆ: 616, ನಂದಿನಿ ಲೇಔಟ್, ಲಗ್ಗೆರೆ, ಬೆಂಗಳೂರು ಇದರ ಮಾರಾಟದಿಂದ ಬಂದ ಹಣ | 3,90,687–00 |
| 5) | ಭಾವನ ಹಳ್ಳಿ, ಸರ್ವೇ ನಂ.139 ಇದರ ಪಿತ್ರಾರ್ಜಿತ ಆಸ್ತಿ ಮಾರಾಟದಿಂದ | –– |
| 6) | ಮಾರುತಿ ಕಾರ್ ಸಂಖ್ಯೆ: ಕೆಎ4–ಎನ್–1242 ಇದರ ಮಾರಾಟ | 85,000–00 |
| 7) | ಎಂ.ಎಂ.ಸಂಸ್ಥೆಯಿಂದ ಪಡೆದಿರುವ ಸಾಲ | 2,70,000–00 |
| 8) | ಜಿಪಿಎಫ್ ಲೆಕ್ಕದಿಂದ ಭಾಗಶ: ಹಣ ಪಡೆದಿರುವುದು | – |
| 9) | ಜಿಪಿಎಫ್ ಸಾಲ | 25,000–00 |
| 10) | ಐ.ಸಿ.ಐ.ಸಿ.ಐ ಬ್ಯಾಂಕ್‌ನಿಂದ ಸಾಲ | 1,00,000–00 |
| 11) | ರಾಷ್ಟ್ರೀಯ ಉಳಿತಾಯ ಸರ್ಟಿಫಿಕೇಟ್‌ನ ಮೆಚ್ಯುರಿಟಿಯಿಂದ ಬಂದ ಹಣ | 15,729–30 |
| 12) | ಬ್ಯಾಂಕ್ ಖಾತೆಗಳಿಂದ ಬಂದಿರುವ ಬಡ್ಡಿ | 5,852–12 |

| ಕ್ರ. ಸಂ. | ಆದಾಯದ ವಿವರಗಳು | ಮೌಲ್ಯ ರೂಪಾಯಿ |
|---|---|---|
| 13) | ವಿದೇಶಗಳಿಂದ ಆದಾಯ, ಸಾಲಗಳು, ಉಡುಗೊರೆ ಇತ್ಯಾದಿ | – |
| 14) | ಸ್ನೇಹಿತರು, ಬಂಧುಗಳ ಮದುವೆ ಹಾಗೂ ಇತರೇ ಸಮಾರಂಭಗಳಿಂದ ಬಂದ ಉಡುಗೊರೆ | – |
| 15) | ಇಲಾಖೆ ಹಾಗೂ ಇತರೇ ಇಂದ ಬಂದ ಬಹುಮಾನ | – |
| | **ಕುಟುಂಬ ಸದಸ್ಯರ ಗಳಿಕೆ** | |
| 16) | ಶ್ರೀ ಎನ್.ಡಿ.ವೆಂಕಟೇಶ್ ಬಾಬು (ಆರೋಪಿತ ಅಧಿಕಾರಿಯವರ ಮಗ) ಇವರಿಂದ ಬಂದ | 44,960–00 |
| 17) | ಆರೋಪಿತ ಅಧಿಕಾರಿಯವರ ಅಳಿಯ ಇವರ ಗಳಿಕೆ | 18,380–00 |
| | ಶ್ರೀಮತಿ ಆಶಾ ಕಿರಣ್ (ಆರೋಪಿತ ಅಧಿಕಾರಿಯವರ ಮಗಳು) ಇವರ ಉದ್ಯೋಗ ಕುರಿತು ಹೆಚ್.ಡಿ.ಎಫ್.ಸಿ ಮತ್ತು ಸ್ಟ್ಯಾಂರ್ಡಡ್ ಚಾರ್ಟರ್ಡ್ ಬ್ಯಾಂಕ್‌ಗಳಿಂದ ಯಾವುದೇ ಅಧಿಕೃತ ಮಾಹಿತಿ ಬಂದಿರುವುದಿಲ್ಲ. | – |
| | **ಒಟ್ಟು ಆದಾಯ** | **18,37,891–42** |

**ಆರೋಪಿತ ಅಧಿಕಾರಿಯವರು ಗಳಿಸಿರುವ ಹೆಚ್ಚುವರಿ ಸಂಪತ್ತು:**

| | |
|---|---|
| ಒಟ್ಟು ಆಸ್ತಿ | ರೂ.30,69,267.56 |
| ಒಟ್ಟು ವೆಚ್ಚ | ರೂ. 53,69,552.28 |
| ಆಸ್ತಿ ಮತ್ತು ವೆಚ್ಚ | ರೂ. 84,38,819.84 |
| ಒಟ್ಟು ಆದಾಯ | ರೂ. 18,37,891.42 |
| ಹೆಚ್ಚುವರಿ ಸಂಪತ್ತು | ರೂ. 55,80,928.42 |

ತನಿಖಾಧಿಕಾರಿಯು ಸಲ್ಲಿಸಿರುವ ಅಂತಿಮ ವರದಿ ಮತ್ತು ದಾಖಲೆಗಳನ್ನು ಒಳಗೊಂಡ ಕಡತಗಳನ್ನು ಸರ್ಕಾರದ ಹಂತದಲ್ಲಿ ಕೂಲಂಕುಷವಾಗಿ ಪರಿಶೀಲಿಸಲಾಗಿದ್ದು, ಮೇಲ್ಕಂಡಂತೆ ಆಪಾದಿತ ಸರ್ಕಾರಿ ಅಧಿಕಾರಿ ಶ್ರೀ ಎನ್.ದೇವಾನಂದಬಾಬು, ವಾಣಿಜ್ಯ ತೆರಿಗೆ ಅಧಿಕಾರಿ, ಇವರು ದಿನಾಂಕ:17–6–1992 ರಿಂದ ಶೋಧನಾ ದಾಳಿ ನಡೆಸಿದ ದಿನಾಂಕ: 10–8–2005 ರವರೆಗಿನ ಅವಧಿಗೆ ಚೆಕ್ ಅವಧಿಯೆಂದು ಈ ಅವಧಿಯಲ್ಲಿ ಆಪಾದಿತರು ಮಾಡಿರುವ ಒಟ್ಟು ಖರ್ಚು ವೆಚ್ಚ 53,69,552.28 ಗಳಾಗಿರುತ್ತವೆ. ಆಪಾದಿತ ಅಧಿಕಾರಿಯು ತಮ್ಮ ಚೆಕ್ ಅವಧಿಯಲ್ಲಿ ಹೊಂದಿರುವ ಆದಾಯದ ಒಟ್ಟು ಮೊತ್ತ ರೂ.18,37,891.42 ಗಳಾಗಿದ್ದು, ಆಪಾದಿತ ಅಧಿಕಾರಿಯು ತಮ್ಮ ಆದಾಯಕ್ಕಿಂತ ಹೆಚ್ಚಿಗೆ ಹೊಂದಿದ ಆಸ್ತಿ ಮತ್ತು ಖರ್ಚು ವೆಚ್ಚಗಳ ಒಟ್ಟು ಮೊತ್ತ 84,38,819.84 ಗಳಾಗಿರುತ್ತದೆ. ಅಂದರೆ ಆಪಾದಿತ ಸಾರ್ವಜನಿಕ ಅಧಿಕಾರಿ ತಮ್ಮ ಎಲ್ಲಾ ಬಲ್ಲ ಮೂಲಗಳ ಆದಾಯಕ್ಕಿಂತಲೂ ಹೆಚ್ಚಿನ ಪ್ರಮಾಣದ ಆಸ್ತಿಯನ್ನು ಹೊಂದಿರುವುದು ಕಂಡುಬರುತ್ತದೆ. ಇದಕ್ಕೆ ಆಪಾದಿತರ ಬಳಿ ಯಾವುದೇ ಸಮಾಧಾನಕರ ವಿವರಣೆ ಅಥವಾ ಲೆಕ್ಕ ಲಭ್ಯವಿರುವುದಿಲ್ಲ.

ಆದ್ದರಿಂದ ಶ್ರೀ ಎನ್.ದೇವಾನಂದಬಾಬು, ವಾಣಿಜ್ಯ ತೆರಿಗೆ ಅಧಿಕಾರಿ, ಇವರು ಲಂಚ ನಿರೋಧಕ ಕಾಯ್ದೆ 1988ರ ಕಲಂ 13(1)(ಇ)ರ ಜೊತೆ ಕಲಂ 13(2)ರ ಅಡಿಯಲ್ಲಿ ಅಪರಾಧ ಎಸಗಿರುವುದು ಸ್ಪಷ್ಟವಾಗಿ ಸರ್ಕಾರಕ್ಕೆ ಮನವರಿಕೆಯಾಗಿರುತ್ತದೆ.

ಆಪಾದಿತ ಸರ್ಕಾರಿ ನೌಕರರು ತಮ್ಮ ಎಲ್ಲ ಬಲ್ಲ ಮೂಲಗಳ ಆದಾಯಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ಆಸ್ತಿಯನ್ನು ಗಳಿಸಿ, ಅಪರಾಧಿಕ ದುರ್ನಡತೆ ಎಸಗಿರುವುದರಿಂದ ಸದರಿಯವರನ್ನು ಸಾರ್ವಜನಿಕ ಹಿತದೃಷ್ಟಿಯಿಂದ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಿಸುವುದು ಅತ್ಯವಶ್ಯಕವಾಗಿರುತ್ತದೆಂದು ಸರ್ಕಾರಕ್ಕೆ ಸ್ಪಷ್ಟವಾಗಿ ಮನವರಿಕೆಯಾಗಿರುತ್ತದೆ.

ಆಪಾದಿತ ಅಧಿಕಾರಿಯು ಗ್ರೂಪ್ 'ಬಿ ' ವೃಂದವಾದ ವಾಣಿಜ್ಯ ತೆರಿಗೆ ಅಧಿಕಾರಿ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957 ನಿಯಮ 9(1) ರನ್ವಯ ಸರ್ಕಾರವು, ಆಪಾದಿತರನ್ನು ಕೆಲಸದಿಂದ ತೆಗೆದು ಹಾಕುವ ದಂಡನೆಯನ್ನು ವಿಧಿಸಲು ಅಧಿಕಾರವುಳ್ಳದ್ದಾಗಿರುತ್ತದೆ. ಆದ್ದರಿಂದ ಲಂಚ ನಿರೋಧಕ ಕಾಯ್ದೆ 1988ರ ಕಲಂ 19(1)(ಬಿ) ರನ್ವಯ ಸರ್ಕಾರವು ಆಪಾದಿತ ಅಧಿಕಾರಿಯನ್ನು ಲಂಚ ನಿರೋಧಕ ಕಾಯ್ದೆ, 1988ರ ಕಲಂ 13(1)(ಇ)ರ ಜೊತೆಗೆ ಕಲಂ 13(2)ರ ಅಡಿಯಲ್ಲಿ ಅಭಿಯೋಗಗೊಳಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ. ಅದರಂತೆ ಈ ಕೆಳಕಂಡ ಪರಿಷ್ಕೃತ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 50 ವಾತೆತ 2005, ಬೆಂಗಳೂರು, ದಿನಾಂಕ: 10ನೇ ಸೆಪ್ಟೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಮೇರೆಗೆ ಲಂಚ ನಿರೋಧಕ ಕಾಯ್ದೆ 1988ರ 19(1)(ಬಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಆಪಾದಿತ ಅಧಿಕಾರಿಯಾದ ಶ್ರೀ ಎನ್.ದೇವಾನಂದ ಬಾಬು, ವಾಣಿಜ್ಯ ತೆರಿಗೆ ಅಧಿಕಾರಿ, ವಾಣಿಜ್ಯ ತೆರಿಗೆ ಇಲಾಖೆ, ಇವರ ವಿರುದ್ಧ ಸಕ್ಷಮ ನ್ಯಾಯಾಲಯದಲ್ಲಿ ಲಂಚ ನಿರೋಧಕ ಕಾಯ್ದೆ 13(1)(ಇ) ಜೊತೆಯಲ್ಲಿ ಓದಲಾದ ಕಲಂ 13(2)ರಡಿಯಲ್ಲಿ ಎಸಗಿರುವ ಅಪರಾಧಕ್ಕಾಗಿ ಅಭಿಯೋಜಿಸಲು ಲೋಕಾಯುಕ್ತ ಪೊಲೀಸರಿಗೆ ಈ ಮೂಲಕ ಪರಿಷ್ಕೃತ ಮಂಜೂರಾತಿಯನ್ನು ನೀಡಿದೆ.

ಕರ್ನಾಟಕ ಸರ್ಕಾರದ (ವ್ಯವಹಾರ ನಿರ್ವಹಣೆ) ನಿಯಮಗಳು, 1977ರ ಮೇಲ್ಕಂಡ ನಿಯಮಗಳನ್ವಯ ಈ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ಸಹಿಯ ಅಡಿಯಲ್ಲಿ ದಿನಾಂಕ: 10–09–2009 ರಂದು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2186 **ಎಲ್.ಎಸ್. ವಾಸನ್**

ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ವಾಣಿಜ್ಯ ತೆರಿಗೆ–2).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಹೆಚ್.ಗಂಗಯ್ಯ, ವಿಶೇಷಾಧಿಕಾರಿ, (ನ್ಯಾಯಾಲಯ ಪ್ರಕರಣಗಳು) ಶಿಕ್ಷಣ ಇಲಾಖೆ, ಇವರು ದಂಡನೆ ವಿಧಿಸಿದ ಆದೇಶದ ವಿರುದ್ಧ ಗೌರವಾನ್ವಿತ ರಾಜ್ಯಪಾಲರಿಗೆ ಸಲ್ಲಿಸಿರುವ ಮೇಲ್ಮನವಿ ಕುರಿತು – ಆದೇಶ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂ: ಸಿಆಸುಇ 122 ಎಸ್ಇಎನ್ 2003, 5.2.2008.

2. ಶ್ರೀ ಹೆಚ್.ಗಂಗಯ್ಯ ಇವರ ಮೇಲ್ಮನವಿ ದಿನಾಂಕ: 27.09.2008.

**ಪ್ರಸ್ತಾವನೆ:**

ಶ್ರೀ ಹೆಚ್.ಗಂಗಯ್ಯ, ವಿಶೇಷಾಧಿಕಾರಿ, (ನ್ಯಾಯಾಲಯ ಪ್ರಕರಣಗಳು) ಶಿಕ್ಷಣ ಇಲಾಖೆ, ಅವರು ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ ಈ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಇಲಾಖೆಯ ನಿವೃತ್ತ ಜಂಟಿ ನಿರ್ದೇಶಕರಾದ ಶ್ರೀ ಕೃಷ್ಣೋಜಿರಾವ್‌ರವರು ನಿವೃತ್ತಿ ಸೌಲಭ್ಯಗಳನ್ನು ಬಿಡುಗಡೆ ಮಾಡಲು ಕೋರಿ ಸಲ್ಲಿಸಿದ ಅರ್ಜಿಯನ್ನು ಮಹಾಲೇಖಪಾಲರಿಗೆ ಕಳುಹಿಸಲು 1 ವರ್ಷಕ್ಕಿಂತ ಹೆಚ್ಚು ವಿಳಂಬ ಮಾಡಿದ ಆರೋಪಕ್ಕಾಗಿ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆದು ಮೇಲೆ (1) ರಲ್ಲಿ ಓದಲಾದ ದಿನಾಂಕ:05.02.2008ರ ಸರ್ಕಾರಿ ಆದೇಶದಲ್ಲಿ ಅವರಿಗೆ ವಾಗ್ದಂಡನೆ ವಿಧಿಸಲಾಗಿತ್ತು ಹಾಗೂ ನಿವೃತ್ತಿ ವೇತನ ವಿಳಂಬ ಪಾವತಿಯ ಬಡ್ಡಿ ಹಣವನ್ನು ಶ್ರೀ ಹೆಚ್.ಗಂಗಯ್ಯನವರಿಂದಲೇ ವಸೂಲಿ ಮಾಡಲು ಆದೇಶಿಸಲಾಗಿತ್ತು.

ಮೇಲ್ಕಂಡ ದಂಡನೆ ಆದೇಶದ ವಿರುದ್ಧ ಶ್ರೀ ಗಂಗಯ್ಯನವರು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957 ರ ನಿಯಮ 18 ರನ್ವಯ ಘನತೆವೆತ್ತ ರಾಜ್ಯಪಾಲರಿಗೆ ಮೇಲೆ (2) ರಲ್ಲಿ ಓದಲಾದ ದಿನಾಂಕ:27.09.2008ರ ಮೇಲ್ಮನವಿ ಸಲ್ಲಿಸಿದರು. ತತ್ಸಂಬಂಧ ಪರಿಶೀಲನಾ ಟಿಪ್ಪಣಿ ಈ ಮುಂದಿನಂತಿದೆ:

| ಕ್ರಮ ಸಂಖ್ಯೆ | ಮೇಲ್ಮನವಿ ಕಂಡಿಕೆ | ಷರಾ |
|---|---|---|
| Para 1 | The appellant submits that a show cause notice was issued to the appellant as per notice bearing No.C.Aa.Su.E 122 SES 03, dated: 5.07.2007 under rule 12 of the Karnataka Civil Services (Classification, Control and Appeal) Rules, 1957 calling upon him to submit his explanation to the charge that he has caused delay in submitting the pension records of one Shri Krishnoji Rao, Joint Director and thereby committed misconduct and caused loss to the Government in paying interest to the said officer for delayed payment of pensionery benefits. The said notice was issued in pursuance of the report submitted by the Hon'ble Lokayukta. A copy of the said notice is produced herewith and marked as ANNEXURE-A. | Factual, No remarks. |
| Para 2 | The appellant submits that immediately on receipt of the said notice, the appellant has submitted his reply to the notice bringing it to the notice of the respondent that Shri Krishnoji Rao is Class I Gazetted Officer and the appellant is in no way responsible for submitting the pension papers. The said officer being a self drawing officer is required to submit his pension papers to the Accountant General directly and the pension is required to be sanctioned by the Government being the appointing authority. The appellant however by way of abundant caution explained in detail the steps that were required to be taken by the said officer and non-compliance of the same by the concerned officer. A copy of the explanation submitted by the appellant is produced and marked as ANNEXURE-B. The averments made in the reply may kindly be read as part and parcel of this appeal memo in order to avoid repetition. | Factual, No Remarks. |

| ಕ್ರಮ ಸಂಖ್ಯೆ | ಮೇಲ್ಮನವಿ ಕಂಡಿಕೆ | ಷರಾ |
|---|---|---|
| Para 3 | The appellant submits that without considering any of the contentions raised by the appellant in his reply, the respondent has passed an order bearing No.C.Aa.Su.E 122 SES 03, dated: 5.07.2008 censuring the appellant and directing recovery of the amount paid to Sri.Krishnoji Rao, as interest on delayed payment of pensionary benefits from the appellant herein. A copy of the said order dated:5.07.2008 is produced herewith and marked as ANNEXURE -C. | The order is issued only after considering the contentions put-forth by the Appellant. |
| Para 4 | The appellant submits that Sri Krishnoji Rao Joint Director retired from service on 30.09.2001. He has submitted his pension papers to the Accountant General directly on 18.1.2002. The officer is required to submit his pensionery papers 6 months in advance. The Officer himself has submitted the pension paper after a delay of more than 9 months. Under the G.O.No.FD(Spl) 864 PEN 84 dated:14.8.85 in computing the period of delay attributable to the retiring Government servant is to be excluded. | No Remarks. |
| Para 5 | Under the Government Order bearing No.FD(Spl) 4 CPP 87, dated:10.12.1987, in respect of Gazetted Government servants, the Administrative Department concerned in the secretariat is required to send Form 7A with facts if any having a bearing on the pension and DCRG to the Accountant General . The appellant submits that Sri Krishnoji Rao has unnecessarily made unfounded allegation against the appellant. The appellant is in no way responsible in the delay in the matter of payment of his pension. | After investigation, the lokayukta found the Appellant to be responsible for delay in forwarding pension papers in respect of Krishnoji Rao, Retired Joint Director of Printing, Stationary and Publications. Therefore on the recommendations of Hon'ble Lokayukta the enquiry came to be initiated. |
| Para 6 | The appellant submits that he has taken prompt action as required under the rules and in best interests of the Government as explained by him in the reply to the notice as per Annexure -C. The impugned order has been passed by picking a few sentences here and there out of context without considering the reply in its correct prospective with the intention to hold the appellant guilty. The averments made in the reply dated:29.09.2007 may kindly be read as part and parcel of this appeal in order to avoid repetition. | Remarks furnished to above para hold good here also. |

| ಕ್ರಮ ಸಂಖ್ಯೆ | ಮೇಲ್ಮನವಿ ಕಂಡಿಕೆ | ಷರಾ |
|---|---|---|
| Para 7 | The appellant submits that since disputed questions of facts were involved in view of the reply filed by the appellant, it was incumbent on the part of the Disciplinary Authority/ the Government to have held a detailed enquiry by following the procedure prescribed under rule 11(5) onwards of the KCS (CCA) Rules, 1957 as held by the Hon'ble Supreme Court, High Court and the Karnataka Administrative Tribunal. The impugned order dated: 5.07.2008 is therefore in utter violations of the principles of natural justice. | The contention of the Appellant is not correct. The penalty of "Censure" which is mildest is imposed on the appellant. |
| Para 8 | The appellant submits that Sri Krishnoji Rao Director, retired from service on 30.09.2001. He has submitted his pension papers to the Accountant General directly on 18.01.2002. The officer is required to submit his pensionery papers to the Accountant General 6 months in advance. The officer himself has submitted the pension paper after a delay of more than 9 months. Under G.O.No.FD(Spl) 864 PEN 84 dated:14.08.1985 in computing the period of delay any period of delay attributable to the retiring Government servant is to be excluded. | This is the repetition of para 4 above to which remarks are already furnished. |
| para 9 | Under the Government order bearing No.FD (Spl) 4 CPP 87, dated: 10.12.1987, in respect of Gazetted Government servants, the Administrative Department concerned in the secretariat is required to send FORM 7A with facts if any having a bearing on the pension and DCRG to the Accountant General. The appellant submits that Sri Krishnoji Rao has unnecessarily made unfounded allegation against the appellant. The appellant is in no way responsible in the delay in the matter of payment of his pension. | This is the repetition of para 5 above to which remarks are already furnished. |
| para 10 | The appellant submits that he has taken prompt action as required under the rules and in best interests of the Government as explained by him in the reply to the notice as per Annexure-C. The impuged order has been passed by picking a few sentences here and there out of context without considering the reply in its correct prospective with the intention to hold the appellant guilty. The averments made in the reply dated:29.09.2007 may kindly be read as part and parcel of this appeal in order to avoid repetition. | Remarks furnished to para 6 hold good here also. |

| ಕ್ರಮ ಸಂಖ್ಯೆ | ಮೇಲ್ಮನವಿ ಕಂಡಿಕೆ | ಷರಾ |
|---|---|---|
| Para 11 | The appellant submits that since disputed questions of facts were involved in view of the reply filed by the appellant, it was incumbent on the part of the Disciplinary Authority/ the Government to have held a detailed enquiry by following the procedure prescribed under Rule 11(5) onwards of the KCS (CCA) Rules, 1957 as held by the Hon'ble Supreme Court, High Court and the Karnataka Administrative Tribunal. The impugned order dated:5.7.2008 is therefore in utter violations of the principles of natural justice. | Remarks furnished to para 7 hold good here also. |
| Para 12 | Viewed from any angle, the action of the respondents is clearly illegal and arbitrary. | The action is legally sustainable. It is taken after carefully examining all aspects of the case. |
| Para 13 | The appellant submits that in view of the facts and grounds mentioned herein before, the impugned order passed against the appellant is clearly illegal and arbitrary and without application of mind. The appellant submits that he has a good case on merits and is likely to succeed in the above appeal. The appellant submits that if an interim order is prayed for is not granted, the appellant would be put to irreparable loss and injury. On the contrary, if an interim order as prayed for is granted, the respondents would not suffer any loss or injury. Hence, the interim order as prayed for may please be granted in the interest of justice and equity. | Contention of the appellant is not correct. The order is passed after examining all aspects of the case. The reply furnished by the Appellant is considered in detail before arriving at a decision. |
| para 16 | WHEREFORE, it is humbly prayed that this Hon'ble Authority may be pleased to grant the following reliefs:-<br>i) CALL for the records relating to the impugned order bearing No.C.Aa.Su.E 122 SES 03, dated: 5.07.2008(Annexure-c), peruse the same and set aside the same with all consequential benefits.<br>ii) PASS such other order or direction as this Hon'ble Authority deems fit in the circumstance of the case, in the interest of justice and equity. | The appellant is not entitled for the relief claimed. |
| para 17 | Pending disposal of the aforesaid Appeal Petition, the appellant humbly prays that the implementation, operation and all further proceedings pursuant to the impugned order bearing No. C.Aa.Su.E 122 SES 03, dated: 5.07.2008(Annexure-c) may kindly be stayed, in the interest of justice and equity. | The appellant is not entitled for the interim relief also. |

ಮೇಲ್ಕಂಡ ವಾಸ್ತಾವಂಶಗಳನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರವಾದ ಘನತೆವೆತ್ತ ರಾಜ್ಯಪಾಲರು ಈ ಮುಂದಿನಂತೆ ಆದೇಶಿಸಿದ್ದಾರೆ:

**ಆದೇಶ ಸಂ:ಸಿಆಸುಇ 24 ಸೇಇಮು 2009, ಬೆಂಗಳೂರು, ದಿನಾಂಕ: 2ನೇ ಸೆಪ್ಟೆಂಬರ್, 2009**

I have considered the appeal petition submitted under rule 18 of KCS (CCA) Rules 1957 by Shri H.Gangaiah, Special Officer, Education Department against Government Order No.DPAR 122 SEN 2003, dated: 5.07.2008 imposing the penalty of "Censure" and ordering the recovery of amount of interest payable to the retired Joint Director, Government Text Book Press, Mysore, from him, in the light of the contentions raised in the appeal petition and the connected enquiry and appeal records.

The charge of undue delay in forwardal of pension records of Joint Director (Retd.) to the Accountant General, while he was working as Director, Department of Printing, Stationery and Publications in the enquiry has been proved beyond doubt and hence, the Government is right in imposing the penalty of Censure and ordering recovery of interest payable to the retired officer.

The contention of the appellant that the retired officer had submitted the pension proposals belatedly, the impugned order has been passed without considering his replies, etc., do not merit consideration, since the appellant himself has admitted that there was some delay in settling the claims of the retired officer, as the shifting operations of the printing machinery from the site of Vidhana Soudha South Block to Peenya Industrial area were in progress and the routine official transactions could not be given much attention.

I therefore dismiss the appeal petition and uphold the order passed by the Disciplinary Authority.

**H.R. BHARDWAJ**
Governor of Karnataka

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ಎಸ್. ಶಿವರಾಮ್**
ಪಿ.ಆರ್. 2288 ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ. (ಸೇವೆಗಳು–3)

## PERSONNEL AND ADMINISTRATIVE REFORMS SECRETARIAT

### NOTIFICATION

**No. DPAR 53 SAS 2009, Bangalore, Dated: 17th September 2009**

Sri Abhijit Dasgupta, IAS (KN 75), Commissioner, Bangalore Metropolitan Regional Development Authority, Bangalore is promoted to officiate in the Above Super Time Scale of IAS carrying the pay scale of Rs. 80000/- (fixed) Grade Pay Nil, with immediate effect and his services are continued until further orders in the Urban Development Department as Commissioner, Bangalore Metropolitan Regional Development Authority, Bangalore.

Government herey declare u/r 9 of IAS (Pay) Rules, 2007 that the post of Commissioner, Bangalore Metropolitan Regional Development Authority, Bangalore in the Above Super Time Scale of IAS i.e. Rs.80000/- (fixed) Grade Pay Nil, is equivalent in status and responsibilities to the Cadre post of Additional Chief Secretary to Government included in the Schedule II to the said Rules.

By Order and in the name of the Governor of Karnataka
**K.G. ANANTHA**
P.R. 2233 Under Secretary to Government,
Department of Personnel and Administrative Reforms (Services-I)

## ಒಳಾಡಳಿತ ಸಚಿವಾಲಯ

**ತಿದ್ದುಪಡಿ ಸಂಖ್ಯೆ: ಒಇ 303 ಪೊಸಿಪ 2009, ಬೆಂಗಳೂರು, ದಿನಾಂಕ: 16ನೇ ಸೆಪ್ಟೆಂಬರ್ 2009**

ಸರ್ಕಾರದ ಅಧಿಸೂಚನೆ (ಭಾಗ–1) ಸಂಖ್ಯೆ:ಒಇ 25 ಪೊಸಿಪ 2008 ದಿನಾಂಕ: 20.03.2008ರ ಕ್ರಮ ಸಂಖ್ಯೆ 1ರಲ್ಲಿ "ಶ್ರೀ ಪಿ.ನಾಗರಾಜ್" ಎಂಬುದರ ಬದಲಾಗಿ "ಶ್ರೀ ಪಿ.ನಾಗರಾಜು" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
ಪಿ.ಆರ್. 2235 **ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ :** ಶ್ರೀ ಬಿ. ವೆಂಕಣ್ಣ, ನಿರೂಪಣಾಧಿಕಾರಿ ಹಾಗೂ ಪ್ರಭಾರ ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ರಾಯಚೂರು, ಇವರ ಅಮಾನತ್ತಿನ ಆದೇಶವನ್ನು ರದ್ದುಪಡಿಸಿ ಸೇವೆಗೆ ಪುನರ್ ಸ್ಥಾಪಿಸುವ ಕುರಿತು–ಆದೇಶ.

**ಓದಲಾಗಿದೆ :**
1) ಕರ್ನಾಟಕ ರಾಜ್ಯ ದಲಿತ ಸಂಘರ್ಷ ಸಮಿತಿ (ರಿ) ಜಿಲ್ಲಾ ಸಮಿತಿ ರಾಯಚೂರು ರವರ ಪತ್ರ ದಿ :13.7.2009.
2) ಸರ್ಕಾರದ ಆದೇಶ ಸಂಖ್ಯೆ ಮಮಇ 65 ಐಸಿಡಿ 2009, ಬೆಂಗಳೂರು ದಿನಾಂಕ :18.6.2009.
3) ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರ ಕಛೇರಿಯ ಆದೇಶ ಸಂಖ್ಯೆ ನಿಸಿಶಿಪ–04/2009–2010 ದಿ :13.7.2009.
4) ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರ ಕಛೇರಿಯ ಕಾರಣ ಕೇಳುವ ನೋಟೀಸ್ ಸಂಖ್ಯೆ ನಿಸಿಶಿಪ–04/2009–2010 ದಿ :13.7.2009.
5) ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರ ಕಛೇರಿಯ ಏಕ ಕಡತ ಸಂಖ್ಯೆ :ನಿಸಿಶಿಪ–04(1) 2009–2010.
6) ಸರ್ಕಾರದ ಆದೇಶ ಸಂಖ್ಯೆ :ಮಮಇ 381 ಎಸ್ ಜೆಡಿ 2009 ದಿ :14.7.2009.
7) ಶ್ರೀ ಬಿ. ವೆಂಕಣ್ಣ, ನಿರೂಪಣಾಧಿಕಾರಿ ಹಾಗೂ ಪ್ರಭಾರ ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ರಾಯಚೂರು (ಅಮಾನತ್ತಿನಲ್ಲಿರುವವರು) ಮನವಿ ದಿ :28.7.2009.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ:13.7.2009ರ ಪತ್ರದಲ್ಲಿ ಕರ್ನಾಟಕ ರಾಜ್ಯ ದಲಿತ ಸಂಘರ್ಷ ಸಮಿತಿ (ರಿ) ರಾಯಚೂರು ಜಿಲ್ಲೆ ಹಾಗೂ ಲಿಂಗಸುಗೂರು ತಾಲ್ಲೂಕು, ಅಧ್ಯಕ್ಷರು, ಕಾರ್ಯದರ್ಶಿಗಳು, ಸದಸ್ಯರುಗಳು, ಗೌರವಾನ್ವಿತ ಲೋಕಾಯುಕ್ತ ನ್ಯಾಯಮೂರ್ತಿಗಳು, ಬೆಂಗಳೂರು ಇವರಿಗೆ ಲಿಂಗಸುಗೂರು ತಾಲ್ಲೂಕಿನಲ್ಲಿ ಮಿನಿ ಅಂಗನವಾಡಿ ಕೇಂದ್ರಗಳಿಗೆ ಅಂಗನವಾಡಿ ಕಾರ್ಯಕರ್ತೆಯವರನ್ನು ಗುರುತಿಸುವ ಸಂಬಂಧ ದಿ:17.6.2009 ರಂದು 32 ಮಹಿಳೆಯರಿಗೆ ಅಂಗನವಾಡಿ ಕಾರ್ಯಕರ್ತೆಯರನ್ನು ಗುರುತಿಸಲು ಆದೇಶಗಳನ್ನು ಹೊರಡಿಸಿ ಇವರುಗಳಿಂದ ತಲಾ ರೂ. 50,000/– ಗಳನ್ನು ತೆಗೆದುಕೊಂಡು ಸುಳ್ಳು ಆದೇಶ ನೀಡಿದ್ದಾರೆಂದು ಆರೋಪಿಸಿ, ಈ ಬಗ್ಗೆ ದಿ:4.7.2009ರಂದು ಸಂಯುಕ್ತ ಕರ್ನಾಟಕ ದಿನಪತ್ರಿಕೆಯಲ್ಲಿ ವರದಿಯಾಗಿದೆಯೆಂದು, ಈ ವಿಷಯದಲ್ಲಿ ಸಂಬಂಧಪಟ್ಟ ರಾಯಚೂರು ಜಿಲ್ಲೆಯಲ್ಲಿನ ಪ್ರಭಾರ ಉಪನಿರ್ದೇಶಕರು ಸಹ ಶಾಮೀಲಾಗಿರುತ್ತಾರೆಂದು, ಈ ಬಗ್ಗೆ ತನಿಖೆ ನಡೆಸಿ ಸೂಕ್ತ ಕ್ರಮ ತೆಗೆದುಕೊಳ್ಳಲು ದೂರಿನ ಪ್ರತಿಯನ್ನು ಹಾಗೂ ಸಂಬಂಧಿಸಿದ ಆದೇಶ ಹಾಗೂ ಪತ್ರಿಕಾ ವರದಿಯ ಪ್ರತಿಗಳನ್ನು ಸಲ್ಲಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿ:18.6.2009 ರ ಸರ್ಕಾರದ ಆದೇಶದಲ್ಲಿ ರಾಯಚೂರು ಜಿಲ್ಲೆಯ ಲಿಂಗಸುಗೂರು ತಾಲ್ಲೂಕಿಗೆ 12 ಮಿನಿ ಅಂಗನವಾಡಿ ಕೇಂದ್ರಗಳು ಮಂಜೂರಾಗಿರುತ್ತವೆ. ಈ ಅಂಗನವಾಡಿ ಕೇಂದ್ರಗಳಿಗೆ 12 ಅಂಗನವಾಡಿ ಕಾರ್ಯಕರ್ತೆಯರನ್ನು ಗುರುತಿಸುವ ಅವಶ್ಯಕತೆ ಇರುತ್ತದೆ. ಆದರೆ ಸರ್ಕಾರದ ಆದೇಶಕ್ಕಿಂತ ಮೊದಲೇ ಅಂದರೆ ದಿ:16.6.2009 ರಂದು ಗುರುತಿಸಲು ಪ್ರಸ್ತಾವನೆ ಸಲ್ಲಿಸಿರುವುದು ಮತ್ತು ಜಿಲ್ಲಾ ಕಛೇರಿಯಿಂದ ಆದೇಶವನ್ನು ದಿ:17.6.2009ರಂದು ಹೊರಡಿಸಿರುವುದು ನಿಯಮಬಾಹಿರವಾಗಿರುತ್ತದೆ. ಈ ಪ್ರಕ್ರಿಯೆಯಲ್ಲಿ 24 (8+8+8) ಮಹಿಳೆಯರನ್ನು ಅಂಗನವಾಡಿ ಕಾರ್ಯಕರ್ತೆಯವರನ್ನು ಗುರುತಿಸಲು ಜಿಲ್ಲಾ ಉಪನಿರ್ದೇಶಕರ ಕಛೇರಿಯಿಂದ ಒಂದೇ ದಿನದಲ್ಲಿ ಅಂದರೆ ದಿ:17.6.2009 ರಂದು 3 ಆದೇಶಗಳನ್ನು ಹೊರಡಿಸಿದ್ದು, ಆದೇಶದಲ್ಲಿ ಗೌರವಧನ ನಮೂದಿಸದೇ ಕ್ರಮವಾಗಿ 10, 08, 04 ಮಹಿಳೆಯರನ್ನು ಅಂಗನವಾಡಿ ಕಾರ್ಯಕರ್ತೆರನ್ನಾಗಿ ಗುರುತಿಸಿರುತ್ತಾರೆ. ಸದರಿ ಆದೇಶವು ಗಣಕ ಯಂತ್ರದಲ್ಲಿ ಬೆರಳಚ್ಚು ಮಾಡಿದ್ದು. ಗುರುತಿಸಲ್ಪಟ್ಟ ಮಹಿಳೆಯರ ಹೆಸರುಗಳನ್ನು ಕೈ ಬರಹದಲ್ಲಿ ಬರೆದಿರುವುದು ಕಂಡು ಬಂದಿರುತ್ತದೆ. ಈ ಆದೇಶದಲ್ಲಿ ಕಛೇರಿಯ ವಿಳಾಸ ಮತ್ತು ರವಾನೆ ಸಂಖ್ಯೆಯನ್ನು ನಮೂದಿಸಿರುವುದಿಲ್ಲ ಹಾಗೂ ಆ ಆದೇಶಗಳ ಪ್ರಸ್ತಾವನೆಯಲ್ಲಿ 08 ಮಿನಿ ಅಂಗನವಾಡಿ ಕೇಂದ್ರಗಳಿಗೆ ಸಂಬಂಧಪಟ್ಟ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು 08 ಅಂಗನವಾಡಿ ಕಾರ್ಯಕರ್ತೆರನ್ನು ಗುರುತಿಸಲು ವಿನಂತಿಸಿರುತ್ತಾರೆಂದು ತಿಳಿಸುತ್ತಾ, ಆದೇಶಗಳಲ್ಲಿ ಕ್ರಮವಾಗಿ 10, 08, 04 ಮಹಿಳೆಯರನ್ನು ಗುರುತಿಸಿರುವುದು ಕಂಡು ಬಂದಿದ್ದು, ಸಂಶಯಕ್ಕೆ ಎಡೆಮಾಡಿಕೊಡುತ್ತದೆ ಹಾಗೂ ಇದು ದುರುದ್ದೇಶಪೂರ್ವಕವಾಗಿರುವುದು ಧೃಡಪಟ್ಟಿರುತ್ತದೆ. ಸದರಿ ದೂರಿನಲ್ಲಿ ಲಗತ್ತಿಸಿರುವ ಆದೇಶ ಹಾಗೂ ಪತ್ರಿಕಾ ವರದಿಯನ್ನು ಪರಿಶೀಲಿಸಲಾಗಿ ಶ್ರೀ ಪಿ. ವೈ. ಗಾಜಿಯವರ್ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು, ಲಿಂಗಸಗೂರು ಹಾಗೂ ಶ್ರೀ ಬಿ. ವೆಂಕಣ್ಣ, ನಿರೂಪಣಾಧಿಕಾರಿ ಹಾಗೂ ಪ್ರಭಾರ ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ರಾಯಚೂರು, ಇವರುಗಳು ಮಿನಿ ಅಂಗನವಾಡಿ ಕೇಂದ್ರಗಳಿಗೆ ಕಾರ್ಯಕರ್ತೆಯರನ್ನು ಗುರುತಿಸುವ ಪ್ರಕ್ರಿಯೆಗೆ ಸಂಬಂಧಿಸಿದಂತೆ ಕರ್ತವ್ಯ ಲೋಪ ಹಾಗೂ ಅವ್ಯವಹಾರ ನಡೆಸಿರುವುದು ಮೇಲ್ನೋಟಕ್ಕೆ ಕಂಡು ಬರುತ್ತದೆ ಎಂದು ವರದಿಯಾಗಿದೆ.

ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ದಿ:13.7.2009ರ ನಿರ್ದೇಶಕರ ಕಛೇರಿಯ ಆದೇಶದಲ್ಲಿ ಶ್ರೀ ಪಿ.ವೈ. ಗಾಜಿಯವರ್, ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು, ಲಿಂಗಸುಗೂರು ರಾಯಚೂರು ಜಿಲ್ಲೆ ಇವರ ವಿರುದ್ಧದ ಇಲಾಖಾ ವಿಚಾರಣೆ ಬಾಕಿಯಿರಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸಲಾಗಿರುತ್ತದೆ.

ಮೇಲೆ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ದಿ:13.7.2009ರ ನಿರ್ದೇಶಕರ ಕಚೇರಿಯ ಕಾರಣ ಕೇಳುವ ನೋಟೀಸನ್ನು ಶ್ರೀ ಬಿ. ವೆಂಕಣ್ಣ ನಿರೂಪಣಾಧಿಕಾರಿ, ಹಾಗೂ ಪ್ರಭಾರ ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರಿಗೆ ಜಾರಿ ಮಾಡಿ ಲಿಖಿತ ಹೇಳಿಕೆಯನ್ನು 07 ದಿನಗಳೊಳಗಾಗಿ ನೀಡುವಂತೆ ಸೂಚಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ನಿರ್ದೇಶಕರ ಕಛೇರಿಯ ಏಕ ಕಡತದಲ್ಲಿ ರಾಯಚೂರು ಜಿಲ್ಲಾ ಪ್ರಭಾರ ಉಪನಿರ್ದೇಶಕರಾದ ಶ್ರೀ ಬಿ. ವೆಂಕಣ್ಣನವರು ಲಿಂಗಸುಗೂರು ಮಿನಿ ಅಂಗನವಾಡಿ ಕೇಂದ್ರಗಳಿಗೆ ಕಾರ್ಯಕರ್ತೆಯರನ್ನು ಗುರುತಿಸುವ ಪ್ರಕ್ರಿಯೆಯಲ್ಲಿ ಶಾಮೀಲಾಗಿರುವುದರಿಂದ ನಿಯಮಾನುಸಾರ ಇವರ ಮೇಲೆ ಸೂಕ್ತ ಕ್ರಮ ಕೈಗೊಳ್ಳುವಂತೆ ಕೋರಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿ, ಸದರಿ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ ಮೇಲೆ ಕ್ರಮ ಸಂಖ್ಯೆ (6)ರಲ್ಲಿ ಓದಲಾದ ದಿ:14.7.2009ರ ಆದೇಶದಲ್ಲಿ ಶ್ರೀ ಬಿ. ವೆಂಕಣ್ಣ, ನಿರೂಪಣಾಧಿಕಾರಿ, ಹಾಗೂ ಪ್ರಭಾರ ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ರಾಯಚೂರು ಇವರನ್ನು ಅವರ ಮೇಲಿನ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ಅಮಾನತ್ತುಗೊಳಿಸಿ ಆದೇಶಿಸಲಾಗಿದೆ.

ಮೇಲೆ ಕ್ರಮಸಂಖ್ಯೆ (7)ರಲ್ಲಿ ಓದಲಾದ ದಿ:28.7.2009ರ ಶ್ರೀ ಬಿ. ವೆಂಕಣ್ಣ ಇವರ ಮನವಿಯಲ್ಲಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ನಿರ್ದೇಶನಾಲಯವು ದಿ:13.7.2009ರಂದು ಜಾರಿ ಮಾಡಲಾಗಿರುವ ಕಾರಣ ಕೇಳುವ ನೋಟೀಸ್‌ನಲ್ಲಿ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ರೀತ್ಯಾ ಶಿಸ್ತು ಕ್ರಮ ಏಕೆ ಜರುಗಿಸಬಾರದೆಂಬುದಕ್ಕೆ ಲಿಖಿತ ಹೇಳಿಕೆಯನ್ನು 7 ದಿನಗಳೊಳಗಾಗಿ ನೀಡುವಂತೆ ಸೂಚಿಸಲಾಗಿದೆಯೆಂದು ನಿರ್ದೇಶನಾಲಯವು ನಿಗಧಿಪಡಿಸಿದ ಗಡುವು ಮುಗಿಯುವುದೊರಳಗಾಗಿ ಇದೇ ವಿಷಯಕ್ಕೆ ಸಂಬಂಧಿಸಿದಂತೆ ಅವರ ವಿರುದ್ಧದ ಇಲಾಖಾ ವಿಚಾರಣೆ ನಡೆಸುವುದನ್ನು ಬಾಕಿಯಿರಿಸಿ ಸರ್ಕಾರವು ದಿ:14.7.2009ರ ಆದೇಶದಲ್ಲಿ ಅವರನ್ನು ಸೇವೆಯಿಂದ ಅಮಾನತ್ತುಗೊಳಿಸಿರುವುದು ಅವರಿಗೆ ಬಹಳ ಅಘಾತ ಉಂಟು ಮಾಡಿರುತ್ತದೆಂದು ತಿಳಿಸಿರುತ್ತಾರೆ. ಮುಂದುವರೆದು ನಿರ್ದೇಶನಾಲಯದ ದಿ:13.7.2009ರ ಕಾರಣ ಕೇಳುವ ನೋಟೀಸ್ ಹಾಗೂ ಸರ್ಕಾರದ ದಿ:14.7.2009ರ ಆದೇಶದಲ್ಲಿ ನಮೂದಿಸಿರುವ ದಿ:17.6.2009 ರ ಮೂರು ಆದೇಶಗಳನ್ನು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಉಪನಿರ್ದೇಶಕರ ಕಛೇರಿ ರಾಯಚೂರಿನಿಂದ ಹೊರಡಿಸಿರುವುದಿಲ್ಲವೆಂದು ಹಾಗೂ ಅದರಲ್ಲಿರುವ ಸಹಿಯು ಅವರ ಸಹಿಯಾಗಿರುವುದಿಲ್ಲವೆಂದು, ಅದು ಖೋಟಾ (Forgery Signature) ಸಹಿಯಾಗಿರುವುದರಿಂದ ಸದರಿ ಮೂರು ಆದೇಶಗಳು ಜಾರಿಯಾಗುವ ಪ್ರಶ್ನೆ ಉದ್ಭವಿಸುವುದಿಲ್ಲವೆಂದು ಸದರಿ ವಿಷಯದಲ್ಲಿ ಯಾರೋ ಕಿಡಿಗೇಡಿಗಳು ಕಂಪ್ಯೂಟರ್ ಮೂಲಕ ಸಿದ್ಧಪಡಿಸಿರುವ ಖೋಟಾ (Fake) ಆದೇಶಗಳಾಗಿದ್ದು, ಸದರಿ ಮೂರು ಆದೇಶಗಳಲ್ಲಿ ಗೌರವಧನದ ವಿವರಗಳನ್ನು ಕೂಡ ನಮೂದಿಸದೇ ಗುರುತಿಸಲಾದ ಅಭ್ಯರ್ಥಿಗಳ ಹೆಸರುಗಳನ್ನು ಕೈಯಿಂದ ಬರೆದು ಅವರೇ ಆದೇಶ ಹೊರಡಿಸಿದಂತೆ ದಾಖಲೆಗಳನ್ನು ಸೃಷ್ಟಿ ಮಾಡಿರುವುದು ಸ್ಪಷ್ಟವಾಗುತ್ತದೆಂದು, ಈ ಮೂರು ಆದೇಶಗಳ ಪೈಕಿ ಎರಡು ಆದೇಶಗಳಲ್ಲಿ ಉಪನಿರ್ದೇಶಕರು, ಎಂದು ಹಾಗೂ ಒಂದು ಆದೇಶದಲ್ಲಿ ಸಹಾಯಕ ನಿರ್ದೇಶಕರು ಎಂದು ಬೆರಳಚ್ಚು ಮಾಡಿ ಮೂರು ಆದೇಶಗಳಲ್ಲಿನ ಸಹಿಯು ಒಂದೇ ತರಹದ ಸಹಿಯಾಗಿರದೆ ಬೇರೆ ಬೇರೆ ಸಹಿಗಳಾಗಿರುವುದು ಸ್ಪಷ್ಟವಾಗುತ್ತದೆ ಹಾಗೂ ಈ ಸಹಿಗಳು, ಅವರ ಸಹಿಗೆ, ಅವರ ಬರವಣಿಗೆಗೆ (Signature and handwriting) ತಾಳೆ ಹೊಂದುವುದಿಲ್ಲ, ಅಂದರೆ ಅವರ ಸಹಿಯನ್ನು Forgery ಮಾಡಿರುವುದು ಸ್ಪಷ್ಟವಾಗುತ್ತದೆಂದು, ಸೇವೆಯಲ್ಲಿ ಮುಂಬಡ್ತಿ ಬರುತ್ತಿರುವ ಈ ಸಂದರ್ಭದಲ್ಲಿ ಯಾರೋ ಕುತಂತ್ರಿಗಳು ಕಪ್ಪು ಚುಕ್ಕೆ ಬರುವಂತೆ ಮಾಡಿ ಅನ್ಯಾಯ ಮಾಡುವ ದುರುದ್ದೇಶದಿಂದ ಷಡ್ಯಂತ್ರವನ್ನು ರಚಿಸಿರುವುದು ಸ್ಪಷ್ಟವಾಗುತ್ತದೆ. ಈ ವಿಷಯದಲ್ಲಿ ಕೂಲಂಕಷವಾಗಿ ವಿಚಾರಿಸಿ ಸಂಬಂಧಪಟ್ಟವರ ವಿರುದ್ಧ ಕ್ರಿಮಿನಲ್ ಮೊಕದ್ದಮೆಯನ್ನು ದಾಖಲು ಮಾಡುವುದಾಗಿ ತಿಳಿಸುತ್ತಾ ಅವರ ವಿರುದ್ಧ ಹೂಡಲು ಉದ್ದೇಶಿಸಿರುವ ಶಿಸ್ತು ಕ್ರಮವನ್ನು ಕೈಬಿಟ್ಟು ಸರ್ಕಾರವು ದಿ:14.7.2009 ರಂದು ಹೊರಡಿಸಿರುವ ಅಮಾನತ್ತಿನ ಆದೇಶವನ್ನು ರದ್ದುಪಡಿಸಿ ಅವರನ್ನು ಸೇವೆಗೆ ಪುನರ್ ಸ್ಥಾಪಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಸರ್ಕಾರವು ಶ್ರೀ ಬಿ. ವೆಂಕಣ್ಣ, ನಿರೂಪಣಾಧಿಕಾರಿ, ಹಾಗೂ ಪ್ರಭಾರ ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ರಾಯಚೂರು (ಅಮಾನತ್ತಿನಲ್ಲಿರುವವರು) ಇವರ ಮನವಿಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಅವರನ್ನು ಅಮಾನತ್ತುಗೊಳಿಸಿ ದಿ:14.7.2009 ರಂದು ಹೊರಡಿಸಿರುವ ಆದೇಶವನ್ನು ಹಿಂಪಡೆದು ಅವರ ಮೇಲಿನ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ಅವರನ್ನು ಸೇವೆಗೆ ಪುನರ್ ಸ್ಥಾಪಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಮಮಇ 381 ಎಸ್‌ಜಿಡಿ 2009, ಬೆಂಗಳೂರು, ದಿನಾಂಕ:29ನೇ ಆಗಸ್ಟ್, 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀ ಬಿ. ವೆಂಕಣ್ಣ, ನಿರೂಪಣಾಧಿಕಾರಿ, ಹಾಗೂ ಪ್ರಭಾರ ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ರಾಯಚೂರು ಇವರನ್ನು ಅವರ ಮೇಲಿನ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ದಿ:14.7.2009 ರಂದು ಅಮಾನತ್ತುಗೊಳಿಸಿ ಹೊರಡಿಸಿರುವ ಆದೇಶವನ್ನು ಹಿಂಪಡೆದು ಅವರನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಗೆ ಪುನರ್ ಸ್ಥಾಪಿಸಿ ಅವರು ಈ ಹಿಂದೆ ಕಾರ್ಯನಿರ್ವಹಿಸುತ್ತಿದ್ದ ಹುದ್ದೆಯಾದ ನಿರೂಪಣಾಧಿಕಾರಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ರಾಯಚೂರು ಹುದ್ದೆಯಲ್ಲಿ ಹಾಗೂ ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ರಾಯಚೂರು ಹುದ್ದೆಯ ಅಧಿಕ ಪ್ರಭಾರದಲ್ಲಿ ಮುಂದುವರೆಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2117

**ಆರ್. ನರಸಿಂಹಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ–2 (ಪ್ರಭಾರ)

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಶ್ರೀ ಎನ್.ಹೆಚ್. ಸೂಳೆಬಾವಿ ಮತ್ತು ಶ್ರೀ ಎಸ್. ಕೃಷ್ಣಮೂರ್ತಿ, ಕೆ.ಎ.ಎಸ್ ಅಧಿಕಾರಿಗಳು, ಹಿಂದಿನ ವಿಶೇಷ ಭೂ ಸ್ವಾಧೀನಾಧಿಕಾರಿಗಳು, ಕೃಷ್ಣ ಮೇಲ್ದಂಡೆ ಯೋಜನೆ, ಜಮಖಂಡಿ ಹಾಗೂ ಸದರಿ ಕಛೇರಿಯ ಪ್ರಥಮ ದರ್ಜೆ ಸಹಾಯಕರಾದ ಶ್ರೀ ಎಸ್. ಪಿ. ವಡ್ಡರ, ಶ್ರೀ ಡಿ.ಜಿ. ದೊಡ್ಡಮನಿ, ಪ್ರಥಮ ದರ್ಜೆ ಕಂದಾಯ ನಿರೀಕ್ಷಕರು ಇವರುಗಳ ವಿರುದ್ಧ ಜಂಟೀ ಇಲಾಖಾ ವಿಚಾರಣೆ–ಮಂಡನಾಧಿಕಾರಿಯವರನ್ನು ಬದಲಾಯಿಸಿ ನೇಮಿಸುವ ಬಗ್ಗೆ.

**ಓದಲಾಗಿದೆ :**
1) ದಿನಾಂಕ :6.9.07 ರ ಸರ್ಕಾರಿ ಆದೇಶ ಸಂಖ್ಯೆ :ಸಿಆಸುಇ 140 ಎಸ್‌ಇಎನ್ 01
2) ದಿನಾಂಕ :23.11.07 ರ ಸರ್ಕಾರಿ ಆದೇಶ ಸಂಖ್ಯೆ :ಸಿಆಸುಇ 280 ಕೆಇವಿ 07
3) ದಿನಾಂಕ :11.8.09 ರ ಅಪರ ಪ್ರಾದೇಶಿಕ ಆಯುಕ್ತರು, ಗುಲ್ಬರ್ಗಾ ವಿಭಾಗ, ಗುಲ್ಬರ್ಗಾ ಇವರ ಪತ್ರ ಸಂಖ್ಯೆ :ಪ್ರಾಆಗು/ಶಿಸ್ತು/22/07–08/1772.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಶ್ರೀ ಎನ್.ಹೆಚ್. ಸೂಳೆಬಾವಿ ಮತ್ತು ಶ್ರೀ ಎಸ್. ಕೃಷ್ಣಮೂರ್ತಿ, ಕೆಎಎಸ್ ಅಧಿಕಾರಿಗಳು, ಇವರು ಈ ಹಿಂದೆ ಕೃಷ್ಣ ಮೇಲ್ಕಂಡೆ ಯೋಜನೆ, ಜಮಖಂಡಿ ಇಲ್ಲಿ ವಿಶೇಷ ಭೂ ಸ್ವಾಧೀನಾಧಿಕಾರಿಗಳಾಗಿ ಹಾಗೂ ಸದರಿ ಕಛೇರಿಯ ಪ್ರಥಮ ದರ್ಜೆ ಸಹಾಯಕರಾದ ಶ್ರೀ ಎಸ್. ಪಿ. ವಡ್ಡರ ಶ್ರೀ ಡಿ.ಜಿ. ದೊಡ್ಡಮನಿ, ಪ್ರಥಮ ದರ್ಜೆ ಕಂದಾಯ ನಿರೀಕ್ಷಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಇವರುಗಳು ಮುದ್ರಾಂಕ ಶುಲ್ಕ ವಿನಾಯಿತಿ ಪಡೆಯಲು ಸಂತ್ರಸ್ತರಿಗೆ ನೀಡಲಾದ ಪ್ರಮಾಣ ಪತ್ರಗಳಲ್ಲಿ ಕಟ್ಟಡಗಳ ಮೌಲ್ಯಕ್ಕಿಂತ ಹೆಚ್ಚು ಮೌಲ್ಯ ನಮೂದಿಸಿ ಪ್ರಮಾಣ ಪತ್ರ ನೀಡಿರುವುದರಿಂದ ಸರ್ಕಾರಕ್ಕೆ ರೂ., 6,50,011–00ಗಳ ನಷ್ಟ ಉಂಟಾಗಿರುವ ಆರೋಪದ ಸಂಬಂಧ ಇವರುಗಳ ವಿರುದ್ದ ಜಂಟಿ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಿ, ಇಲಾಖಾ ವಿಚಾರಣೆ ನಡೆಸಿ ವರದಿ ಸಲ್ಲಿಸಲು ಹೆಚ್ಚುವರಿ ಆಯುಕ್ತರು, ಪ್ರಾದೇಶಿಕ ಆಯುಕ್ತರ ಕಛೇರಿ, ಗುಲ್ಬರ್ಗಾ ರವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕೇಂದ್ರ ಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಬಾಗಲಕೋಟೆ ಇವರನ್ನು ಮಂಡನಾಧಿಕಾರಿಯನ್ನಾಗಿ ಸರ್ಕಾರವು ನೇಮಿಸಿದೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ, ಮಂಡನಾಧಿಕಾರಿಯಾದ ಕೇಂದ್ರ ಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ ಬಾಗಲಕೋಟೆ ಇವರ ಬದಲಿಗೆ ಕೇಂದ್ರ ಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಗುಲ್ಬರ್ಗಾ ಇವರನ್ನು ಮಂಡನಾಧಿಕಾರಿಯಾಗಿ ನೇಮಿಸಿದೆ.

ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಪತ್ರದಲ್ಲಿ ಅಪರ ಪ್ರಾದೇಶಿಕ ಆಯುಕ್ತರು, ಗುಲ್ಬರ್ಗಾ ವಿಭಾಗ, ಗುಲ್ಬರ್ಗಾ ಇವರು ಮಂಡನಾಧಿಕಾರಿಯಾದ ಕೇಂದ್ರ ಸ್ಥಾನಿಕ ಸಹಾಯಕರು ಜಿಲ್ಲಾಧಿಕಾರಿಗಳ ಕಛೇರಿ, ಗುಲ್ಬರ್ಗಾ ರವರು ಇಲಾಖಾ ವಿಚಾರಣಾ ದಿನಾಂಕಗಳಂದು ಸತತವಾಗಿ ಗೈರುಹಾಜರಾಗುತ್ತಿರುವ ಕಾರಣ ಇಲಾಖಾ ವಿಚಾರಣೆ ಪ್ರಕ್ರಿಯೆ ಪೂರ್ಣಗೊಳಿಸಲು ಸಾಧ್ಯವಾಗುತ್ತಿಲ್ಲವೆಂದು ಆದಕಾರಣ ಇವರ ಬದಲಿಗೆ ವಿಶೇಷ ಭೂ ಸ್ವಾಧೀನಾಧಿಕಾರಿಗಳು, ಸಣ್ಣ ಮತ್ತು ಮಧ್ಯಮ ನೀರಾವರಿ ಯೋಜನೆಗಳು ಗುಲ್ಬರ್ಗಾ ರವರನ್ನು ಸದರಿ ಪ್ರಕರಣದಲ್ಲಿ ಮಂಡನಾಧಿಕಾರಿಯಾಗಿ ನೇಮಿಸುವಂತೆ ಕೋರಿರುತ್ತಾರೆ. ಇವರ ಕೋರಿಕೆಯನ್ನು ಸರ್ಕಾರವು ಪರಿಶೀಲಿಸಿ, ಕೆಳಗಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 280 ಕೆಇವಿ 07, ಬೆಂಗಳೂರು, ದಿನಾಂಕ:7ನೇ ಸೆಪ್ಟೆಂಬರ್, 2009**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 115(5)(c) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಕೇಂದ್ರ ಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಗುಲ್ಬರ್ಗಾ ಇವರ ಬದಲಿಗೆ ವಿಶೇಷ ಜಿಲ್ಲಾಧಿಕಾರಿಗಳು/ವಿಶೇಷ ಭೂ ಸ್ವಾಧೀನಾಧಿಕಾರಿಗಳು, ಸಣ್ಣ ಮತ್ತು ಮಧ್ಯಮ ನೀರಾವರಿ ಯೋಜನೆಗಳು, ಗುಲ್ಬರ್ಗಾ ಇವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2131

**ಹೆಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ವಿಷಯ :** ಶ್ರೀ ಆರ್.ವೈ. ಅಗಡಿ, ಉಪನಿರ್ದೇಶಕರು (ಪ್ರಭಾರ), ಗಣಿ ಮತ್ತು ಭೂವಿಜ್ಞಾನ ಇಲಾಖೆ, ಸೇಡಂ, ಇವರನ್ನು ಅಮಾನತ್ತಿನಲ್ಲಿಡುವ ಕುರಿತು.

**ಓದಲಾಗಿದೆ :** ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರ ಪತ್ರ ಸಂಖ್ಯೆ :ಗಭೂಇ/ಸಿಬ್ಬಂದಿ–ಅ/ಡಿಡಿಎಸ್/2009–10/1615, ದಿನಾಂಕ :20.8.2009.

**ಪ್ರಸ್ತಾವನೆ:**

ದಿನಾಂಕ:20.2.2001 ರಂದು, ಭೂವಿಜ್ಞಾನಿ, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಸೇಡಂ ಇವರು ಮೆ:ಕೇಸೋರಾಂ ಇಂಡಸ್ಟ್ರೀಸ್ ಲಿಮಿಟೆಡ್ ಇವರಿಗೆ ರೂ. 23,06,63,731–00 ಗಳ ರಾಜಧನವನ್ನು ಪಾವತಿಸುವಂತೆ ಜಾರಿಗೊಳಿಸಿದ್ದ ಡಿಮ್ಯಾಂಡ್ ನೋಟೀಸ್‌ನ್ನು ಪ್ರಶ್ನಿಸುತ್ತಾ ಸದರಿ ಸಂಸ್ಥೆಯು ರಾಜ್ಯ ಉಚ್ಚ ನ್ಯಾಯಾಲಯದಲ್ಲಿ W.P.No.7954 ಮತ್ತು 7991/2001ಗಳನ್ನು ದಾಖಲಿಸಿದ್ದು, ಮಾನ್ಯ ನ್ಯಾಯಾಲಯವು ದಿನಾಂಕ:9.1.2004ರಲ್ಲಿ ನೀಡಿರುವ ತೀರ್ಪಿನಲ್ಲಿ ಈ ಕೆಳಕಂಡಂತೆ ಉಲ್ಲೇಖಿಸಿತ್ತು:

> 'However having regard to the fact that public revenue is involved instead of quashing Ann. G, the same is directed to be treated as showcause notice, petitioner is permitted to file his objections if any within 4 weeks from the date of receipt of the order and the respondents shall take into consideration the objections filed by the petitioner and determine the actual amount due by the petitioner. After such determination, they are free to take such action as is open to them in law to recover the same….''

Ratio factor for the consumption of limestone to clinker ಸರ್ಕಾರದ ಪರಿಶೀಲನೆಯಲ್ಲಿದ್ದು, ಇನ್ನೂ ಇತ್ಯರ್ಥವಾಗಿರುವುದಿಲ್ಲ.

ಈ ಪ್ರಕರಣದಲ್ಲಿ ಮಾನ್ಯ ನ್ಯಾಯಾಲಯವು ದಿನಾಂಕ:9.1.2004 ರಂದು ತೀರ್ಪನ್ನು ನೀಡಿದ್ದು, ಸುಮಾರು 5 ವರ್ಷಗಳು ಕಳೆದ ನಂತರ ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಸೇಡಂ ಇಲ್ಲಿ ಉಪನಿರ್ದೇಶಕರ ಹುದ್ದೆಯಲ್ಲಿ ಪ್ರಭಾರಿಯಾಗಿ ಕಾರ್ಯ ನಿರ್ವಹಿಸುತ್ತಿರುವ ಶ್ರೀ ಆರ್.ವೈ. ಅಗಡಿ, ಹಿರಿಯ ಭೂವಿಜ್ಞಾನಿ, ಗುಲ್ಬರ್ಗಾ ಇವರು ಮೆ:ಕೇಸೋರಾಂ ಇಂಡಸ್ಟ್ರೀಸ್ ಲಿಮಿಟೆಡ್ ಇವರಿಗೆ ಪರಿಷ್ಕೃತ ಡಿಮ್ಯಾಂಡ್ ನೋಟೀಸ್‌ನ್ನು ಜಾರಿ ಮಾಡಿ, 1992 ರಿಂದ ದಿನಾಂಕ:31.3.08ರವರೆಗೆ ಹಾಗೂ 2008–09ನೇ ಸಾಲಿಗಾಗಿ ratio factor ಅನ್ನು 1:1.40 ಎಂದು ತಮ್ಮಷ್ಟಕ್ಕೆ ತಾವೇ ನಿರ್ಧರಿಸಿ ಪರಿಷ್ಕೃತ Audit reports ಅನ್ನು ಜಾರಿಗೊಳಿಸಿದ್ದು, ಇದರಿಂದಾಗಿ ಸರ್ಕಾರದ ಬೊಕ್ಕಸಕ್ಕೆ ಸುಮಾರು ರೂ. 55.00 ಕೋಟಿಗಳಷ್ಟು ನಷ್ಟವುಂಟಾಗುವಂತೆ ಮಾಡಿರುವರೆಂದು, 2008–09ನೇ ಸಾಲಿಗಾಗಿ ಸುಮಾರು 38.00ಕೋಟಿಗಳಷ್ಟು ಬಡ್ಡಿ ಮೊತ್ತವನ್ನು ಮನ್ನಾ ಮಾಡಿರುತ್ತಾರೆಂದು ತಿಳಿಸುತ್ತಾ audit ವರದಿಯ ಪರಿಷ್ಕರಣೆಗಾಗಿ ಮತ್ತು ಬಡ್ಡಿ ಮೊತ್ತವನ್ನು ಮನ್ನಾ ಮಾಡಲಿಕ್ಕಾಗಿ ಈ ಅಧಿಕಾರಿಗೆ ಯಾವುದೇ ಅಧಿಕಾರ ಇರುವುದಿಲ್ಲವೆಂದೂ, ಗುತ್ತಿಗೆದಾರರಿಗೆ ಸಹಕರಿಸುವ ಉದ್ದೇಶದಿಂದಲೇ ಹೀಗೆ ಮಾಡಿರುತ್ತಾರೆಂದು ಉಲ್ಲೇಖಿಸುತ್ತಾ ಶ್ರೀ ಆರ್.ವೈ. ಅಗಡಿ, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಸೇಡಂ, ಇವರನ್ನು ತಕ್ಷಣವೇ ಅಮಾನತ್ತಿನಲ್ಲಿರಿಸಿ ಆದೇಶಿಸುವಂತೆ ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರು ಮೇಲೆ (1) ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಐ 114:ಎಂಜಿಎಸ್. 2009, ಬೆಂಗಳೂರು, ದಿನಾಂಕ:5ನೇ ಸೆಪ್ಟೆಂಬರ್, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಮೇರೆಗೆ, ಶ್ರೀ ಆರ್.ವೈ. ಅಗಡಿ, ಹಿರಿಯ ಭೂವಿಜ್ಞಾನಿ, ಗುಲ್ಬರ್ಗಾ ಹಾಗೂ ಉಪನಿರ್ದೇಶಕರು (ಪ್ರಭಾರ), ಸೇಡಂ, ಇವರ ವಿರುದ್ಧದ ಆರೋಪಗಳ ಕುರಿತು ವಿಚಾರಣೆಯನ್ನು ಕಾಯ್ದಿರಿಸಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 10(1)(ಡಿ)ರ ಪ್ರಕಾರ, ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸರ್ಕಾರವು ಅಮಾನತ್ತುಗೊಳಿಸಿದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಆರ್.ವೈ. ಅಗಡಿ, ಇವರು ನಿಯಮಗಳ ಪ್ರಕಾರ ಜೀವನಾಧಾರ ಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಆರ್.ವೈ. ಅಗಡಿ, ಇವರು ನಿಯಮಗಳ ಪ್ರಕಾರ ಸಕ್ಷಮ ಪ್ರಾಧಿಕಾರಿಯವರ ಲಿಖಿತ ಅನುಮತಿ ಪಡೆಯದೆ, ಕೇಂದ್ರ ಕಾರ್ಯಸ್ಥಾನ ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2133

**ಎ.ಪಿ. ರಾಮಕೃಷ್ಣ**
ಪೀಠಾಧಿಕಾರಿ (ಗಣಿ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಕಾರ್ಮಿಕ ಸಚಿವಾಲಯ

**ವಿಷಯ :** ಡಾ:ಕೆ.ಎನ್. ಲಕ್ಷ್ಮೀ ವಿಮಾ ವೈದ್ಯಾಧಿಕಾರಿ, ಕಾರಾವಿ ಚಿಕಿತ್ಸಾಲಯ, ಬೊಮ್ಮಸಂದ್ರ, ಬೆಂಗಳೂರು ಇವರು ಕರ್ತವ್ಯದಿಂದ ಅನಧಿಕೃತವಾಗಿ ಗೈರು ಹಾಜರಾದ ಬಗ್ಗೆ ಇಲಾಖಾ ವಿಚಾರಣೆಯನ್ನು ಕೈಗೊಳ್ಳುವ ಕುರಿತು.

**ಓದಲಾಗಿದೆ :**

1. ನಿರ್ದೇಶಕರು, ಕಾರಾವಿ ಯೋಜನೆ ವೈದ್ಯಕೀಯ ಸೇವೆಗಳು ರವರ ಪತ್ರ ಸಂಖ್ಯೆ ಇಎಸ್ ಐಎಸ್/ಇವಿ/24/05–06, ದಿನಾಂಕ :30.11.2005.
2. ಸರ್ಕಾರದ ನೋಟೀಸ್ ಸಂಖ್ಯೆ :ಕಾಇ 475 ಎಲ್ಎಸ್ಐ 2005, ದಿನಾಂಕ :2.1.2006.
3. ನಿರ್ದೇಶಕರು, ಕಾರಾವಿ ಯೋಜನೆ ವೈದ್ಯಕೀಯ ಸೇವೆಗಳು ರವರ ಪತ್ರ ಸಂಖ್ಯೆ :ಇಎಸ್ಐಎಸ್ / ಇವಿ/24/05–06, ದಿನಾಂಕ :16.5.2006 ಮತ್ತು 14.7.2006.
4. ಸರ್ಕಾರದ ಆದೇಶ ಸಂಖ್ಯೆ :ಕಾಇ 475 ಎಲ್ಎಸ್ಐ 2005, ದಿನಾಂಕ :26.9.2006.
5. ಶ್ರೀ ಎಂ.ಎಸ್ .ರಾಜೇಂದ್ರ ಪ್ರಸಾದ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಇವರ ಮನವಿ ದಿನಾಂಕ :18.1.2007.
6. ಸರ್ಕಾರದ ಆದೇಶ ಸಂಖ್ಯೆ :ಕಾಇ 475 ಎಲ್ಎಸ್ಐ 2005, ದಿನಾಂಕ :21.2.2007.
7. ದಿನಾಂಕ :18.12.2007ರಂದು ಸರ್ಕಾರಕ್ಕೆ ಸಲ್ಲಿಸಿರುವ ವಿಚಾರಣಾಧಿಕಾರಿಗಳ ವಿಚಾರಣಾ ವರದಿ.
8. 2ನೇ ಕಾರಣ ಕೇಳುವ ನೋಟೀಸ್ ಸಂಖ್ಯೆ :ಕಾಇ 475 ಎಲ್ಎಸ್ಐ 2005, ದಿನಾಂಕ :31.10.2008.
9. ನಿರ್ದೇಶಕರು, ಕಾರಾವಿ ಯೋಜನೆ ವೈದ್ಯಕೀಯ ಸೇವೆಗಳು ರವರ ಪತ್ರ ಸಂಖ್ಯೆ :ಇಎಸ್ ಐಎಸ್/ಇವಿ/24/05–06, ದಿನಾಂಕ :23.3.2009.

**ಪ್ರಸ್ತಾವನೆ:**

ನಿರ್ದೇಶಕರು, ಕಾರಾವಿ ಯೋಜನೆ ವೈದ್ಯಕೀಯ ಸೇವೆಗಳು ಇವರು ಮೇಲೆ ಓದಲಾದ (1)ರ ದಿನಾಂಕ:30.11.2005ರ ಪತ್ರದಲ್ಲಿ ಡಾ:ಕೆ.ಎನ್. ಲಕ್ಷ್ಮಿ ವಿಮಾ ವೈದ್ಯಾಧಿಕಾರಿ, ಕಾರಾವಿ ಚಿಕಿತ್ಸಾಲಯ ಬೊಮ್ಮಸಂದ್ರ, ಬೆಂಗಳೂರು ಇವರು ದಿನಾಂಕ:1.6.2005 ರಿಂದ ಇಲ್ಲಿಯವರೆಗೆ ಅನಧಿಕೃತವಾಗಿ ಗೈರು ಹಾಜರಾದ ಆರೋಪಗಳ ಕುರಿತು, ಇಲಾಖಾ ವಿಚಾರಣೆ ನಡೆಸುವಂತೆ ಕೋರಿದ್ದರು. ಡಾ: ಕೆ.ಎನ್. ಲಕ್ಷ್ಮೀ ಇವರ ಅನಧಿಕೃತ ಗೈರು ಹಾಜರಾತಿಗೆ ಸಂಬಂಧಿಸಿದಂತೆ ಇಲಾಖಾ ವಿಚಾರಣೆ ನಡೆಸುವ ಸಲುವಾಗಿ ಮೇಲೆ (2)ರಲ್ಲಿ ಓದಲಾದ ದಿನಾಂಕ:2.1.2006ರ ಷೋಕಾಸ್ ನೋಟೀಸಿನೊಂದಿಗೆ ದೋಷಾರೋಪಣಾ ಪಟ್ಟಿಯನ್ನು ನೋಂದಾಯಿತ ಅಂಚೆ ಸ್ವೀಕೃತಿ ಮೂಲಕ ಜಾರಿ ಮಾಡಿ ರಕ್ಷಣಾ ಹೇಳಿಕೆ ಏನಾದರೂ ಇದ್ದಲ್ಲಿ ನೋಟೀಸ್ ತಲುಪಿದ 15 ದಿವಸದೊಳಗಾಗಿ ಲಿಖಿತ ಮೂಲಕ ಸರ್ಕಾರಕ್ಕೆ ಸಲ್ಲಿಸಲು ಸೂಚಿಸಲಾಗಿತ್ತು. ಸದರಿ ದೋಷಾರೋಪಣಾ ಪಟ್ಟಿಯನ್ನು ಸಂಬಂಧಪಟ್ಟ ವೈದ್ಯರು ಸ್ವೀಕರಿಸದೇ ಇದ್ದುದರಿಂದ ಈ ನೋಟೀಸನ್ನು ದಿನಾಂಕ:24.5.2006ರಂದು "ಉಷಾಕಿರಣ" ಕನ್ನಡ ದಿನಪತ್ರಿಕೆಯಲ್ಲಿ ಪ್ರಕಟಿಸಿದ್ದರೂ ನಿಗಧಿತ ಅವಧಿಯೊಳಗಾಗಿ ವೈದ್ಯರು ಲಿಖಿತ ಹೇಳಿಕೆಯನ್ನು ಸಲ್ಲಿಸಿರುವುದಿಲ್ಲವೆಂದು ಮೇಲೆ ಓದಲಾದ (3)ರ ಪತ್ರದಲ್ಲಿ ನಿರ್ದೇಶಕರು, ಕಾರಾವಿ ಯೋಜನೆ ವೈದ್ಯಕೀಯ ಸೇವೆಗಳು ಇವರು ತಿಳಿಸಿರುತ್ತಾರೆ. ಮುಂದುವರಿದು ಸಹಾಯಕ ನಿರ್ದೇಶಕರು, C.F.B. ನವದೆಹಲಿ ಇವರು ತಮ್ಮ ದಿನಾಂಕ:20.12.2006ರ ಪತ್ರದಲ್ಲಿ ಸದರಿ ವೈದ್ಯರು ಲಂಡನ್ನಿಗೆ ತೆರಳಿರುವ ಬಗ್ಗೆ ಮಾಹಿತಿ ಒದಗಿಸಿರುತ್ತಾರೆ.

ಡಾ: ಕೆ.ಎನ್. ಲಕ್ಷ್ಮೀ ವಿಮಾ ವೈದ್ಯಾಧಿಕಾರಿ ಇವರು ದಿನಾಂಕ:2.1.2006ರ ಷೋಕಾಸ್ ನೋಟೀಸಿಗೆ ರಕ್ಷಣಾ ಹೇಳಿಕೆ ನೀಡುವಂತೆ, ನೀಡಿದ್ದ ಕಾಲಾವಧಿ ಮೀರಿದ ತರುವಾಯವು ರಕ್ಷಣಾ ಹೇಳಿಕೆಯನ್ನು ಸಲ್ಲಿಸದೇ ಇದ್ದುದರಿಂದ ವೈದ್ಯರ ವಿರುದ್ಧ ವಿಚಾರಣೆ ನಡೆಸಲು ವಿಚಾರಣಾ ಪ್ರಾಧಿಕಾರವನ್ನು ನೇಮಿಸುವಂತೆ ನಿರ್ದೇಶಕರು, ಕಾರಾವಿ ಇವರು ಮೇಲೆ ಓದಲಾದ (3)ರಲ್ಲಿ ಕೋರಿದ್ದರ ಮೇರೆಗೆ ಇಲಾಖಾ ವಿಚಾರಣೆಯನ್ನು ನಡೆಸುವ ಸಲುವಾಗಿ ಶ್ರೀ ಎಂ.ಎಸ್. ರಾಜೇಂದ್ರ ಪ್ರಸಾದ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ಇವರನ್ನು ಮೇಲೆ ಓದಲಾದ (4)ರ ಆದೇಶದಲ್ಲಿ ನೇಮಿಸಲಾಗಿತ್ತು. ಆದರೆ ಈ ನಿವೃತ್ತ ನ್ಯಾಯಾಧೀಶರು ಸದರಿ ಪ್ರಕರಣದ ವಿಚಾರಣೆಯನ್ನು ಕೈಗೊಳ್ಳಲು ತಮ್ಮ ವೈಯಕ್ತಿಕ ಕಾರಣಗಳಿಂದ

ಸಾಧ್ಯವಾಗುವುದಿಲ್ಲವೆಂದು ಮೇಲೆ ಓದಲಾದ (5)ರ ದಿನಾಂಕ:18.1.2007ರ ಪತ್ರದಲ್ಲಿ ಕೋರಿದ್ದರು. ಅದರಂತೆ ಈ ಪ್ರಕರಣದ ಬಗ್ಗೆ ವಿಚಾರಣೆ ನಡೆಸಲು ಶ್ರಿ ಎಂ.ಎಸ್. ರಾಜೇಂದ್ರ ಪ್ರಸಾದ್, ನಿವೃತ್ತ ನ್ಯಾಯಾಧೀಶರು ಇವರ ಬದಲಿಗೆ ಶ್ರೀ ಎ. ಕೃಷ್ಣಪ್ಪ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ಮೇಲೆ ಓದಲಾದ (6)ರ ದಿನಾಂಕ:21.2.2007ರಂದು ಆದೇಶ ಹೊರಡಿಸಲಾಗಿತ್ತು.

ಡಾ:ಕೆ.ಎನ್. ಲಕ್ಷ್ಮಿ ವಿಮಾ ವೈದ್ಯಾಧಿಕಾರಿ ಇವರ ವಿರುದ್ಧ ವಿಚಾರಣಾಧಿಕಾರಿಗಳು ವಿಚಾರಣೆ ನಡೆಸಿ, ದಿನಾಂಕ:18.12.2007ರಂದು ಸಲ್ಲಿಸಿರುವ ವಿಚಾರಣಾ ವರದಿಯಲ್ಲಿ ವೈದ್ಯಾಧಿಕಾರಿಯವರು ಕಾರಾವಿ ಚಿಕಿತ್ಸಾಲಯ, ಬೊಮ್ಮಸಂದ್ರ, ಬೆಂಗಳೂರು ಇಲ್ಲಿ ಸೇವೆ ಸಲ್ಲಿಸುತ್ತಿದ್ದಾಗ ದಿನಾಂಕ:1.6.2005 ರಿಂದ ಇಲ್ಲಿಯವರೆಗೆ ಕರ್ತವ್ಯಕ್ಕೆ ಹಾಜರಾಗದೆ ಅನಧಿಕೃತವಾಗಿ ಗೈರು ಹಾಜರಾಗಿರುವ ಆರೋಪವು ಸಾಬೀತಾಗಿರುತ್ತದೆ. ಎಂದು ತಿಳಿಸಿರುತ್ತಾರೆ. ಆದ್ದರಿಂದ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 12 (ಎ) ಪ್ರಕಾರ ಆರೋಪಿತರಿಗೆ ವಿಚಾರಣಾ ವರದಿಯನ್ನು ಕಳುಹಿಸಿ ವರದಿಯ ಅಂಶಗಳನ್ನು ಏಕೆ ಒಪ್ಪಿಕೊಳ್ಳಬಾರದು ಎನ್ನುವ ಬಗ್ಗೆ ಅಹವಾಲು ಸಲ್ಲಿಸುವುದಿದ್ದಲ್ಲಿ 15 ದಿನಗಳ ಒಳಗಾಗಿ ಸಲ್ಲಿಸುವಂತೆ 2ನೇ ಕಾರಣ ಕೇಳುವ ನೋಟೀಸನ್ನು ಮೇಲೆ ಓದಲಾದ (8)ರ ದಿನಾಂಕ:31.10.2008ರಂದು ಜಾರಿ ಮಾಡಲಾಗಿತ್ತು. ಸದರಿ ನೋಟೀಸನ್ನು ವೈದ್ಯರ ಇತ್ತೀಚಿನ ಮನೆಯ ವಿಳಾಸಕ್ಕೆ ನೋಂದಾಯಿತ ಅಂಚೆ ಸ್ವೀಕೃತಿಯ ಮೂಲಕ ದಿನಾಂಕ:1.12.2008ರಂದು ರವಾನಿಸಲಾಗಿತ್ತೆಂದು ಎರಡೂ ವಿಳಾಸಗಳಿಂದಲೂ ''Addresee Left" ಎಂಬ ಷರಾದೊಂದಿಗೆ ಲಕೋಟೆಯು ಹಿಂದಿರುಗಿ ಬಂದಿರುತ್ತದೆಂದು ನಿರ್ದೇಶಕರು, ಕಾರಾವಿ ಇವರು ಮೇಲೆ ಓದಲಾದ (9)ರ ದಿನಾಂಕ:23.3.2009ರ ಪತ್ರದಲ್ಲಿ ವರದಿ ಮಾಡಿರುತ್ತಾರೆ.

ಸರ್ಕಾರದಿಂದ ಹೊರಡಿಸಿದ ದಿನಾಂಕ:31.10.2008ರ 2ನೇ ಷೋಕಾಸ್ ನೋಟೀಸಿಗೂ ವೈದ್ಯರು ಯಾವುದೇ ಲಿಖಿತ ಹೇಳಿಕೆಯನ್ನು ಸಲ್ಲಿಸಿರುವುದಿಲ್ಲ. ಹಾಗೂ ವಿಚಾರಣೆಗೂ ಸಹ ಹಾಜರಾಗಿರುವುದಿಲ್ಲವಾದ್ದರಿಂದ ಇವರ ವಿರುದ್ಧದ ಆರೋಪಗಳು ಇಲಾಖಾ ವಿಚಾರಣೆಯಿಂದ ಸಾಬೀತಾಗಿರುವ ಹಿನ್ನೆಲೆಯಲ್ಲಿ ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 8 (VIII)ರ ಅನುಸಾರ ಇವರನ್ನು ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಲು ಸಕ್ಷಮ ಪ್ರಾಧಿಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಕಾಇ 475 ಎಲ್ಎಸ್ಐ 2005, ಬೆಂಗಳೂರು, ದಿನಾಂಕ:5ನೇ ಸೆಪ್ಟೆಂಬರ್, 2009**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನಲೆಯಲ್ಲಿ ಡಾ:ಕೆ.ಎನ್. ಲಕ್ಷ್ಮಿ ವಿಮಾ ವೈದ್ಯಾಧಿಕಾರಿ ಇವರು ಕಾರ್ಮಿಕ ರಾಜ್ಯ ವಿಮಾ ಚಿಕಿತ್ಸಾಲಯ, ಬೊಮ್ಮನಹಳ್ಳಿ, ಬೆಂಗಳೂರು ಇಲ್ಲಿ ಸೇವೆ ಸಲ್ಲಿಸುತ್ತಿದ್ದಾಗ ದಿನಾಂಕ:1.6.2005ರಿಂದ ಅನಧಿಕೃತವಾಗಿ ಗೈರು ಹಾಜರಾಗಿರುವ ಆರೋಪ ಇಲಾಖಾ ವಿಚಾರಣೆಯಿಂದ ಸಾಬೀತಾಗಿರುವುದರಿಂದ ಇವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 8 (VIII)ರ ಅನುಸಾರ ಇವರನ್ನು ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಲಾಗಿದೆ ಹಾಗೂ ತಕ್ಷಣದಿಂದ ಜಾರಿಗೆ ಬರುವಂತೆ ಇವರನ್ನು ಸರ್ಕಾರಿ ಸೇವೆಯಿಂದ ವಜಾಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2134

**ಗೋವಿಂದಸ್ವಾಮಿ**

ಪೀಠಾಧಿಕಾರಿ

ಕಾರ್ಮಿಕ ಇಲಾಖೆ (ಕಾರಾವಿ ಯೋ (ವೈ) ಸೇವೆಗಳು)

## ಶಿಕ್ಷಣ ಸಚಿವಾಲಯ

**ವಿಷಯ :** ಸರ್ಕಾರಿ ಪ್ರಾಥಮಿಕ ಶಾಲಾ ಶಿಕ್ಷಕರ ವೃಂದದಿಂದ ಸರ್ಕಾರಿ ಗ್ರೇಡ್–2 ಪ್ರೌಢಶಾಲಾ ಹಿಂದಿ ಶಿಕ್ಷಕರ ವೃಂದಕ್ಕೆ ಬಡ್ತಿಗೆ ಪರಿಗಣಿಸುವ ಬಗ್ಗೆ.

**ಓದಲಾಗಿದೆ :**

1. ದಿನಾಂಕ :19.11.2008ರ ಶ್ರೀ ವೆಂಕಟರಮಣಮೂರ್ತಿ ಎನ್.ವಿ. ಮತ್ತು ಇತರರ ಮನವಿ.
2. ಮಾನ್ಯ ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ದಾಖಲಿಸಿರುವ ಅರ್ಜಿ ಸಂ :5496/2008.
3. ದಿನಾಂಕ :5.1.2009ರ ನಿರ್ದೇಶಕರು, ಪ್ರೌಢಶಿಕ್ಷಣ ರವರ ಅ.ಸ.ಪ.ಪತ್ರ ಸಂಖ್ಯೆ ಸಿ4 (2) ಕೆಎಟಿ ದಾವೆ 20/2008–09.
4. ದಿನಾಂಕ :2.1.2009ರ ಸಭಾ ನಡವಳಿಕೆಗಳು.
5. ದಿನಾಂಕ :2.3.2009ರ ಪ್ರಾದೇಶಿಕ ನಿರ್ದೇಶಕರು, ಕೇಂದ್ರೀಯ ಹಿಂದಿ ಸಂಸ್ಥೆ, ಮೈಸೂರು ರವರ ಪತ್ರ ಸಂಖ್ಯೆ :ಎಫ್ ನಂ. 2/67/2008–09/1284
6. ದಿ :28.7.2009ರ ಆದೇಶ ಸಂಖ್ಯೆ :ಇಡಿ 99 ಡಿಜಿಓ 2008.

**ಪ್ರಸ್ತಾವನೆ:**

(1)ಮೇಲೆ (1) ರಲ್ಲಿ ಓದಲಾದ ಅರ್ಜಿಯಲ್ಲಿ ಶ್ರೀ ವೆಂಕಟರಮಣಮೂರ್ತಿ ಮತ್ತು ಇತರರು ಪ್ರಾಥಮಿಕ ಶಾಲಾ ವೃಂದದಿಂದ ಪ್ರೌಢಶಾಲಾ ಸಹ ಶಿಕ್ಷಕರು ಗ್ರೇಡ್–2 ಹುದ್ದೆಗೆ ಬಡ್ತಿ ನೀಡುವಂತೆ ಕೋರಿ ದಾಖಲಿಸಿರುವ ಅರ್ಜಿಯಲ್ಲಿ ಮಾನ್ಯ ಕೆ.ಎ.ಟಿ.ಯು ಈ ಕೆಳಗಿನಂತೆ ಆದೇಶ ಮಾಡಿರುತ್ತದೆ.

‘ i) The first Respondent-Secretary is directed to consider the representation dated 19.11.2008 given by the applicants which has been duly acknowledged by this office on 19.11.2008 and passappropriate orders in accordance with law within two weeks from the date a certified copy of this order is received by him.

ii) till then, the respondents are directed not to fill-up the remaining four vacancies out of nineteen vacancies notified under communication dated:12.11.2008 (Annexure A4 in A.No. 5496/2008)

iii) depending upon the consideration of the representation dated 19.11.2008. and passing of the final order by the first respondent Secretary, the Tribunal would pass final orders on merits of these applications;

iv) office is directed to send a copy of this order to the first respondent within one week from today’’,.

2) ಶ್ರೀ ವೆಂಕಟರಮಣ ಮೂರ್ತಿ ಮತ್ತು ಇತರರು ಪ್ರಾಥಮಿಕ ಶಾಲಾ ಶಿಕ್ಷಕರಾಗಿ ಕಾರ್ಯನಿರ್ವಹಿಸುತ್ತಿದ್ದು ಹಿಂದಿ ಶಿಕ್ಷಣ್ ಪಾರಂಗತ್ ಪದವಿಯನ್ನು ಪಾಸುಮಾಡಿವುದರಿಂದ ಮತ್ತು ಅರ್ಜಿದಾರರು ಸದರಿ ಹುದ್ದೆಗಳಲ್ಲಿ 16 ರಿಂದ 20 ವರ್ಷಗಳ ಸೇವೆ ಸಲ್ಲಿಸಿರುವುದರಿಂದ ಅವರುಗಳ ಸೇವೆಗೆ ಸೇರುವ ಮೊದಲೇ ಕನ್ನಡ ಭಾಷೆಯನ್ನು ಪಿ.ಯು.ಸಿ.ಯಲ್ಲಿ ಒಂದು ವಿಷಯವನ್ನಾಗಿ ತೆಗೆದುಕೊಂಡು ಪಾಸು ಮಾಡಿರುವುದರಿಂದ ಪ್ರೌಢ ಶಾಲಾ ಶಿಕ್ಷಕರ ಗ್ರೇಡ್–2 ಹುದ್ದೆಗೆ ಬಡ್ತಿ ನೀಡುವಂತೆ ಕೋರಿದ್ದಾರೆ. ಸದರಿ ಅರ್ಜಿದಾರರ ಮನವಿಯನ್ನು ಪರಿಶೀಲಿಸಿರುವ ಸಾರ್ವಜನಿಕ ಶಿಕ್ಷಣ ಇಲಾಖೆಯ ಪ್ರೌಢ ಶಿಕ್ಷಣ ನಿರ್ದೇಶಕರು ದಿನಾಂಕ:2.1.2009ರ ನಡವಳಿಯಂತೆ ಒಂದು ಸಭೆಯನ್ನು ನಡೆಸಿ ವಿಷಯವನ್ನು ಸಮಗ್ರವಾಗಿ ಚರ್ಚಿಸಿ ಈ ಕೆಳಗಿನ ಠರಾವಿನೊಂದಿಗೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಅದರಂತೆ ಹಿಂದಿ ಶಿಕ್ಷಣ ಪಾರಂಗತ್ ಕೋರ್ಸನ್ನು ಬಿ.ಎಡ್.ಗೆ ಸಮಾನಂತರವೆಂದು ಪರಿಗಣಿಸಿ ಸರ್ಕಾರಿ ಆದೇಶವನ್ನು ಹೊರಡಿಸುವಂತೆ ಕೋರಿರತ್ತಾರೆ.

> “ಹಿಂದಿ ತರಬೇತಿ ಕಾಲೇಜು, ಮೈಸೂರು ಈ ಸಂಸ್ಥೆಯ ವತಿಯಿಂದ ಹಿಂದಿ ಶಿಕ್ಷಕ ಪಾರಂಗತ್ ತರಬೇತಿಯನ್ನು ನೀಡುತ್ತಿದೆ. ಆದರೆ ಅಂಕಪಟ್ಟಿ ಮತ್ತು ಪ್ರಮಾಣ ಪತ್ರಗಳನ್ನು ಆಗ್ರಾದ ಸೆಂಟ್ರಲ್ ಇನ್‌ಸ್ಟೂಟ್ ಆಫ್ ಹಿಂದಿ ಈ ಸಂಸ್ಥೆಯು ನೀಡುತ್ತಿದೆ. ಸದರಿ ಸಂಸ್ಥೆಯು ಎಂ.ಹೆಚ್.ಆರ್.ಡಿ.ಯಿಂದ ಅನುಮೋದನೆಗೊಂಡಿದೆ. ಆದರೆ ಸರ್ಕಾರದ ಆದೇಶ ಸಂಖ್ಯೆ:ಇಡಿ 53 ಪಿಟಿಐ 2002 ದಿನಾಂಕ:22.6.2002 ರಲ್ಲಿ ಸೆಂಟ್ರಲ್ ಇನ್‌ಸ್ಟೂಟ್ ಆಫ್ ಹಿಂದಿ ಆಗ್ರಾ ವತಿಯಿಂದ ನೀಡುವ ಹಿಂದಿ ಶಿಕ್ಷಣ ಪಾರಂಗತ್ ಕೋರ್ಸ್‌ನ್ನು ಬಿ.ಇಡಿಗೆ ಸಮಾನವೆಂದು ಪರಿಗಣಿಸಬಾರದೆಂದು ತಿಳಿಸಿರುವುದು ಸರಿಯಲ್ಲ. ಈ ಎರಡು ಸಂಸ್ಥೆಗಳು ಎಂ.ಹೆಚ್.ಆರ್.ಡಿ.ಯ ಅಂಗ ಸಂಸ್ಥೆಗಳಾಗಿದ್ದು ಸರ್ಕಾರ ಅನುಮತಿ ನೀಡಿದಂತೆ ಲಘು ತರಬೇತಿ ಹೊಂದಿದಲ್ಲಿ ಅಥವಾ ಎರಡು ಬೋಧನಾ ವಿಷಯಗಳನ್ನು ಅಭ್ಯಾಸ ಮಾಡಿದಲ್ಲಿ ಬಿ.ಇ.ಡಿಗೆ ಸಮವೆಂದು ಪರಿಗಣಿಸಿ ಸರ್ಕಾರಿ ಆದೇಶ ಹೊರಡಿಸಲು ಸರ್ಕಾರವನ್ನು ಕೋರಬಹುದೆಂದು ಸರ್ವಾನುಮತದಿಂದ ತೀರ್ಮಾನಿಸಲಾಯಿತು.

(3) ಮೇಲೆ (5)ರಲ್ಲಿ ಓದಲಾದ ಪತ್ರದಲ್ಲಿ ಪ್ರಾದೇಶಿಕ ನಿರ್ದೇಶಕರು, ಕೇಂದ್ರೀಯ ಹಿಂದಿ ಸಂಸ್ಥಾನ ಮೈಸೂರು ರವರು ಸ್ಪಷ್ಟನೆ ನೀಡಿ, ಮೈಸೂರಿನ ಸರ್ಕಾರಿ ಹಿಂದಿ ಶಿಕ್ಷಕರ ತರಬೇತಿ ಕಾಲೇಜು ನಡೆಸುವ ಕನ್ನಡ ಬೋಧನಾ ಮಾಧ್ಯಮದ ಒಂದು ವಿಷಯದ ಬಗ್ಗೆ ಪೂರಕ ಕೋರ್ಸನ್ನು ಹೊಂದಿದಲ್ಲಿ ಬಡ್ತಿಗೆ ಅರ್ಹರಾಗುತ್ತಾರೆ. ಎಂದು ತಿಳಿಸಿರುತ್ತಾರೆ.

(4) ಮೇಲೆ (6)ರಲ್ಲಿ ಓದಲಾದ ಆದೇಶದಲ್ಲಿ ಶಿಕ್ಷಾ ಸ್ನಾತಕ್, ಹಿಂದಿ ಶಿಕ್ಷಕ್, ಹಿಂದಿ ಶಿಕ್ಷಣ ಪಾರಂಗತ್ ಮತ್ತು ಹಿಂದಿ ಬಿ.ಎಡ್. ಪದವಿಗಳನ್ನು ಪದವಿ ಪೂರ್ವ ತರಗತಿಯಲ್ಲಿ ಕನ್ನಡವನ್ನು ಅಭ್ಯಾಸ ಮಾಡಿರಬೇಕು ಎಂಬ ಷರತ್ತಿಗೊಳಪಟ್ಟು ಸಾಮಾನ್ಯ ಬಿ.ಎಡ್, ಪದವಿಗಳಿಗೆ ತತ್ಸಮಾನ ಪದವಿಗಳೆಂದು ಪರಿಗಣಿಸಿ ಕರ್ನಾಟಕ ಲೋಕ ಸೇವಾ ಆಯೋಗವು ನಡೆಸಿರುವ ಸರ್ಕಾರಿ ಪ್ರೌಢ ಶಾಲಾ ಮುಖ್ಯ ಶಿಕ್ಷಕರ ನೇರ ನೇಮಕಾತಿ ಪರೀಕ್ಷೆಗಳಿಗೂ ಸಹ ಅರ್ಹ ವಿದ್ಯಾರ್ಹತೆಯನ್ನಾಗಿ ಪರಿಗಣಿಸಿ ಈಗಾಗಲೇ ಶಿಕ್ಷಣ ಇಲಾಖೆಯು ಆದೇಶ ಹೊರಡಿಸಲಾಗಿದೆ.

(5) ಮೈಸೂರಿನ ಸರ್ಕಾರಿ ಹಿಂದಿ ಶಿಕ್ಷಕರ ತರಬೇತಿ ಕಾಲೇಜು ನಡೆಸುವ ಲಘು ಅವಧಿಯ ಕನ್ನಡ ಬೋಧನಾ ಕೋರ್ಸ್‌ನಲ್ಲಿ ಉತ್ತೀರ್ಣರಾಗಿದ್ದಲ್ಲಿ ಬಡ್ತಿಗೆ ಅರ್ಹತೆ ಪಡೆಯುತ್ತಾರೆ ಎಂದು ಉಲ್ಲೇಖಿತ ಪತ್ರದಲ್ಲಿ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆರವರ ಸ್ಪಷ್ಟನೆ ನೀಡಿರುತ್ತಾರೆ.

(6) ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ದಿನಾಂಕ:5.1.2009ರಲ್ಲಿ ಪ್ರಸ್ತಾವನೆ ನೀಡಿ ಹಿಂದಿ ಭಾಷೆ ಶಿಕ್ಷಕರು ಮತ್ತೊಂದು ಬಾಷೆಯನ್ನು ಬೋಧನಾ ವಿಷಯವನ್ನಾಗಿ ಅಭ್ಯಾಸ ಮಾಡಿದಲ್ಲಿ ಹಾಗೂ ಕನ್ನಡದಲ್ಲಿ ಲಘು ತರಬೇತಿ ಹೊಂದಿದಲ್ಲಿ ಆಗ್ರಾ ಸಂಸ್ಥೆಯು ನಿಡುವ ಹಿಂದಿ ಶಿಕ್ಷಣ ಪಾರಂಗತ್ ಕೋರ್ಸು ಬಿ.ಇಡಿಗೆ ಸಮವೆಂದು ಪರಿಗಣಿಸಬಹುದೆಂದು ಅಭಿಪ್ರಾಯಪಟ್ಟು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

(7) ಈ ಹಿನ್ನೆಲೆಯಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಯ ಪ್ರೌಢ ಶಿಕ್ಷಣ ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿ ಮಾನ್ಯ ಕರ್ನಾಟಕ ಆಡಳಿತ ನ್ಯಾಯಮಂಡಳಿಯು ನೀಡಿದ ಆದೇಶವನ್ನು ಗಮನದಲ್ಲಿಟ್ಟುಕೊಂಡು ಈ ಕೆಳಗಿನಂತೆ ಆದೇಶ ಮಾಡಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಇಡಿ 58 ಪಿಟಿಐ 2008, ಬೆಂಗಳೂರು, ದಿನಾಂಕ:3ನೇ ಸೆಪ್ಟೆಂಬರ್, 2009**

(8) ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತರ ಅಭಿಪ್ರಾಯದಂತೆ ಹಾಗೂ ನಿರ್ದೇಶಕರು ಪ್ರೌಢ ಶಿಕ್ಷಣ ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ತೆಗೆದುಕೊಂಡ ತೀರ್ಮಾನದಂತೆ 2005ನೇ ಸಾಲಿನ ಪೂರ್ವದಲ್ಲಿ ಕೇಂದ್ರೀಯ ಹಿಂದಿ ಸಂಸ್ಥಾನ ಆಗ್ರಾ ವತಿಯಿಂದ ಸಂಯೋಜನೆ/ಮಾನ್ಯತೆ ಪಡೆದ ಮೈಸೂರಿನ ಸರ್ಕಾರಿ ಹಿಂದಿ ಶಿಕ್ಷಕರ ತರಬೇತಿ ಸಂಸ್ಥೆಯು ನಡೆಸುವ ಹಿಂದಿ ಶಿಕ್ಷಣ ಪಾರಂಗತ್ ಕೋರ್ಸ್‌ನಲ್ಲಿ 2005–06ನೇ ಶೈಕ್ಷಣಿಕ ಸಾಲಿನ ಹಿಂದೆ ಉತ್ತೀರ್ಣರಾದ ಅಭ್ಯರ್ಥಿಗಳು ಲಘು ಅವಧಿಯ ಕನ್ನಡ ಕೋರ್ಸ್ ವಿದ್ಯಾರ್ಹತೆಯನ್ನು ಹೊಂದುವ (Bridge Course) ಷರತ್ತಿಗೆ ಒಳಪಟ್ಟು ಹಿಂದಿ ಶಿಕ್ಷಣ ಪಾರಂಗತ್ ಕೋರ್ಸನ್ನು ಬಿ.ಎಡ್.ಗೆ ಸಮಾನವೆಂದು ಪರಿಗಣಿಸಿ ಆದೇಶಿಸಿದೆ.

(9) ಈ ವಿಷಯದಲ್ಲಿ ಈ ಮೊದಲು ಹೊರಡಿಸಲಾದ ಎಲ್ಲಾ ಆದೇಶಗಳನ್ನು ರದ್ದುಪಡಿಸಲಾಗಿದೆ.

(10) ಈ ಆದೇಶವನ್ನು ದಿನಾಂಕ:2.9.2009ರ ಸಿ.ಆ.ಸು.ಇ (ಸೇವಾ ನಿಯಮಗಳು–ಬಿ) ರವರ ಅ.ಟಿ. ಸಂಖ್ಯೆ:ಸಿಆಸುಇ 98 ಸೇನಿಬಿ 09 ರಲ್ಲಿನ ಅಭಿಪ್ರಾಯದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2135

**ಎಂ.ಎನ್. ಸೋಮಶೇಖರ್**

ಸರ್ಕಾರದ ಅಧೀನ ಕಾರ್ಯದರ್ಶಿಗಳು

ಶಿಕ್ಷಣ ಇಲಾಖೆ

**ವಿಷಯ :** SPFU ಘಟಕವನ್ನು ಮುಂದುವರಿಸುವ ಬಗ್ಗೆ

**ಓದಲಾಗಿದೆ :** 1. ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ :ಡಿಟಿಇ/ಟಿಇಕ್ಯೂಐಪಿ/ ಫಿನ್ /ಸಿಆರ್/–49 2008–09 ದಿನಾಂಕ :20.4.2009.

2. ಎನ್.ಪಿ.ಐ.ಯು ಪತ್ರ ಸಂಖ್ಯೆ : FM/TEQIP/.SPFU/KAR dt :31.3.2009

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರು ವಿಶ್ವಬ್ಯಾಂಕ್ ಕಾರ್ಯಕ್ರಮದಡಿಯಲ್ಲಿ ಬರುವ TEQIP-I 31ನೇ ಮಾರ್ಚ್ 2009 ರಂದು ಮುಕ್ತಯಾವಾಗಿದ್ದು, TEQIP-II 2009–10 ನೇ ಆರ್ಥಿಕ ವರ್ಷದ ಮಧ್ಯದಲ್ಲಿ ಪ್ರಾರಂಭವಾಗಲಿದೆ ಈ ಬಗ್ಗೆ ಕರ್ನಾಟಕದಲ್ಲಿ ಈ ಯೋಜನೆಯನ್ನು ಅನುಷ್ಠಾನಗೊಳಿಸಲು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಕೇಂದ್ರ ಸರ್ಕಾರದ ಮಾನವ ಸಂಪನ್ಮೂಲ ಮತ್ತು ಅಭಿವೃದ್ಧಿ ಸಚಿವಾಲಯ, ನವದೆಹಲಿ, ಇವರಿಗೆ ಒಪ್ಪಿಗೆ ಪತ್ರವನ್ನು ಕಳುಹಿಸಿ, TEQIP ಕಾರ್ಯಕ್ರಮದಡಿ 14 ಇಂಜಿನಿಯರಿಂಗ್ ಕಾಲೇಜುಗಳು ಭಾಗಿಯಾಗಿದ್ದು, ಈ ಯೋಜನೆಯ ಕಾರ್ಯಕ್ರಮದ ಚಟುವಟಿಕೆಗಳು ತಾಂತ್ರಿಕ ನಿರ್ದೇಶನಾಲಯದ ವ್ಯಾಪ್ತಿಗೆ ಬರುವ SPFU ಘಟಕದ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಲಿವೆ. ಈ 14 ಇಂಜಿನಿಯರಿಂಗ್ ಕಾಲೇಜುಗಳ ಪ್ರತಿ ಮಾಹೆಯಲ್ಲಿ ಆಗುವ ಭೌತಿಕ ಮತ್ತು ಆರ್ಥಿಕ ಪ್ರಗತಿಯ ವರದಿಗಳು ಹಾಗೂ ಇತರೆ ಮಾಹಿತಿಗಳನ್ನು ಭಾರತ ಸರ್ಕಾರಕ್ಕೆ ಹಾಗೂ NPIU, NODIA ಇವರುಗಳಿಗೆ SPFU ಮೂಲಕವೇ ಹೋಗಬೇಕಾಗಿರುವುದರಿಂದ TEQIP ಪ್ರಾರಂಭವಾಗುವವರೆಗೆ SPFU ಘಟಕವು ಅತ್ಯಾವಶ್ಯವಾಗಿ ಬೇಕಿರುತ್ತದೆಂದು ತಿಳಿಸಲಾಗಿತ್ತು.

ಏಪ್ರಿಲ್ –2009 ರಿಂದ TEQIP-II ಪ್ರಾರಂಭವಾಗುವವರೆಗೆ SPFU ಘಟಕದಡಿ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿ ವರ್ಗದ ವೇತನ ಹಾಗೂ ಇತರೆ ವೆಚ್ಚಗಳನ್ನು ರಾಜ್ಯ ಸರ್ಕಾರವೇ ಭರಿಸಬೇಕಿದ್ದು. ಈ ಉದ್ದೇಶಕ್ಕೋಸ್ಕರ SPFU ಘಟಕವನ್ನು ಮುಂದುವರಿಸಲು ಆದೇಶ ಕೋರಿ, 2009–10ನೇ ಸಾಲಿನ ಆಯವ್ಯಯದಲ್ಲಿ TEQIP ಕಾರ್ಯಕ್ರಮದಡಿ ಲೇಕ್ಕಶೀರ್ಷಿಕೆ 2203–00–800–0–15 (ಯೋಜನೆ) ಅಡಿಯಲ್ಲಿ ಒದಗಿಸಿರುವ ರೂ. 50.00 ಲಕ್ಷಗಳ ಅನುದಾನದಲ್ಲಿ ಘಟಕದ ವೆಚ್ಚವನ್ನು ಭರಿಸಲು ಕೋರಿರುತ್ತಾರೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಇಡಿ 80 ಟಿಪಿಇ 2009 ಬೆಂಗಳೂರು, ದಿನಾಂಕ:28ನೇ ಆಗಸ್ಟ್, 2009**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ವಿಶ್ವಬ್ಯಾಂಕ್ ಯೋಜನೆ– TEQIP-II ಕೇಂದ್ರ ಸರ್ಕಾರ ಪುರಸ್ಕೃತ ಯೋಜನೆಯಡಿ ತೆಗೆದುಕೊಳ್ಳಲು ಪ್ರಸ್ತಾವನೆ ಪರಿಶೀಲನಾ ಹಂತದಲ್ಲಿರುವುದರಿಂದ SPFU ಘಟಕವನ್ನು TEQIP-II ಪ್ರಾರಂಭವಾಗುವವರೆಗೂ ಸಿಬ್ಬಂದಿ ಸಹಿತ ಮುಂದುವರಿಸಲು ಅನುಮತಿ ನೀಡಲಾಗಿದೆ ಹಾಗೂ ಈ ಉದ್ದೇಶಕ್ಕಾಗಿ ಏಪ್ರಿಲ್–2009 ರಿಂದ TEQIP ಪ್ರಾರಂಭವಾಗುವವರೆಗಿನ ಸಿಬ್ಬಂದಿ ವೆಚ್ಚವನ್ನು 2009–10ನೇ ಸಾಲಿನ ಲೆಕ್ಕಶೀರ್ಷಿಕೆ "2203–00–800–0–18(ಯೋಜನೆ_" ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಸಂಖ್ಯೆ:ಆಇ 886/ವೆಚ್ಚ–8/2009 ದಿನಾಂಕ:22.6.2009 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2136

**ಎನ್.ಆರ್. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ

ಶಿಕ್ಷಣ ಇಲಾಖೆ (ತಾಂತ್ರಿಕ ಶಿಕ್ಷಣ)

## ಕಂದಾಯ ಸಚಿವಾಲಯ

**ವಿಷಯ :** 2009–10ನೇ ಸಾಲಿನಲ್ಲಿ ಬರ ಪೀಡಿತವೆಂದು ಘೋಷಿಸಿರುವ ತಾಲ್ಲೂಕುಗಳಲ್ಲಿ ಮೇವಿನ ಕೊರತೆಯನ್ನು ನಿಭಾಯಿಸಲು ಮಾಡುವ ಸಲುವಾಗಿ ಮೇವು ಬೆಳೆಯಲು ಮೇವಿನ ಬೀಜದ ಮಿನಿ ಕಿಟ್‌ಗಳ ಖರೀದಿಗೆ ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**

1. ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ :ಆಇ 416 ವೆಚ್ಚ–7/2009 ದಿನಾಂಕ :17.4.2009ರ ಮೂಲಕ ಬಂದಿರುವ ಮಾನ್ಯ ಮುಖ್ಯಮಂತ್ರಿಗಳ ಟಿಪ್ಪಣಿ ಸಂಖ್ಯೆ :ಸಿಎಂ/637 ಎಸ್‌ಐಪಿ/09 ದಿನಾಂಕ :6/23–03–2009 ಮತ್ತು ಟಿಪ್ಪಣಿ ಸಂಖ್ಯೆ :ಸಿಎಂ/636/ಎಸ್‌ಐಪಿ/09 ದಿನಾಂಕ :6.3.2009.
2. ಮಾನ್ಯ ಕಂದಾಯ ಮಂತ್ರಿಗಳ ಟಿಪ್ಪಣಿ ಸಂಖ್ಯೆ :ಕಂಸ/ಗೃಕ.685/09 ದಿನಾಂಕ :5.8.2009.
3. ಸರ್ಕಾರದ ಆದೇಶ ಸಂಖ್ಯೆ :ಕಂಇ 167 ಟಿಎನ್‌ಆರ್ 2009, ದಿನಾಂಕ :11.8.2009.
4. ಸರ್ಕಾರಿ ಆದೇಶ ಸಂಖ್ಯೆ :ಕಂಇ 87 ಟಿಎನ್‌ಆರ್2009, ದಿನಾಂಕ :29.8.2009.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಅರ್ಜಿಯಲ್ಲಿ ಮಾನ್ಯ ಮುಖ್ಯಮಂತ್ರಿಗಳ ಟಿಪ್ಪಣಿ ಸಂಖ್ಯೆ:ಸಿಎಂ/636/ಎಸ್‌ಐಪಿ/09 ದಿನಾಂಕ:6.3.2009ರಲ್ಲಿ ಮಾನ್ಯ ಮುಖ್ಯಮಂತ್ರಿಗಳು ಬರ ಪೀಡಿತ ತಾಲ್ಲೂಕುಗಳಲ್ಲಿ ಜಾನುವಾರು ಮತ್ತು ಕುರಿಗಳಿಗೆ ಉಂಟಾಗಬಹುದಾದ ಮೇವಿನ ಕೊರತೆಯನ್ನು ನಿಭಾಯಿಸಲು ಮೇವನ್ನು ಬೆಳೆದು ಸಂಗ್ರಹಿಸಲು ಮತ್ತು ವಿತರಿಸಲು ರೈತರಿಗೆ ಉಚಿತವಾಗಿ ಮೇವಿನ ಬೀಜದ ಮಿನಿ ಕಿಟ್‌ಗಳನ್ನು ಪೂರೈಸಲು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಕರ್ನಾಟಕ ರಾಜ್ಯ ಸಹಕಾರ ಮಾರಾಟ ಮಹಾಮಂಡಳ ನಿಯಮಿತ, ಬೆಂಗಳೂರು ಇವರಿಗೆ ರೂ. 500.00 ಲಕ್ಷಗಳನ್ನು ಬಿಡುಗಡೆ ಮಾಡಲು ಆದೇಶಿಸಿರುತ್ತಾರೆ. ಹಾಗೂ ಈ ಮೇವಿನ ಬೀಜದ ಮಿನಿ ಕಿಟ್‌ಗಳನ್ನು ರೈತರಿಗೆ ವಿತರಿಸುವ ಕಾರ್ಯವನ್ನು ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಇವರ ಮೂಲಕ ಕಾರ್ಯಗತಗೊಳಿಸಲು ಆದೇಶಿಸಿರುತ್ತಾರೆ.

ಮೇಲೆ (1)ರಲ್ಲಿ ಓದಲಾದ ಮಾನ್ಯ ಮುಖ್ಯಮಂತ್ರಿಗಳ ಟಿಪ್ಪಣಿ ಸಂಖ್ಯೆ:ಸಿಎಂ /637/ಎಸ್ ಐಪಿ/09 ದಿನಾಂಕ:6/23–3–2009ರಲ್ಲಿ ಮಾನ್ಯ ಮುಖ್ಯಮಂತ್ರಿಗಳು ಬರ ಪೀಡಿತ ತಾಲ್ಲೂಕುಗಳಲ್ಲಿ ಜಾನುವಾರು ಮತ್ತು ಕುರಿಗಳಿಗೆ ಉಂಟಾಗಬಹುದಾದ ಮೇವಿನ ಕೊರತೆಯನ್ನು ನಿಭಾಯಿಸಲು ಮೇವನ್ನು ಬೆಳೆದು ಸಂಗ್ರಹಿಸಲು ಮತ್ತು ವಿತರಿಸಲು ರೈತರಿಗೆ ಉಚಿತವಾಗಿ ಮೇವಿನ ಬೀಜದ ಮಿನಿ ಕಿಟ್‌ಗಳನ್ನು ಪೂರೈಸಲು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಕರ್ನಾಟಕ ರಾಜ್ಯ ಸಹಕಾರ ಮಾರಾಟ ಮಹಾಮಂಡಳ ನಿಯಮಿತ, ಬೆಂಗಳೂರು ಇವರಿಗೆ ರೂ. 200.00 ಲಕ್ಷಗಳನ್ನು ಬಿಡುಗಡೆ ಮಾಡಲು ಆದೇಶಿಸಿರುತ್ತಾರೆ. ಹಾಗೂ ಈ ಮೇವಿನ ಬೀಜದ ಮಿನಿ ಕಿಟ್‌ಗಳನ್ನು ರೈತರಿಗೆ ವಿತರಿಸುವ ಕಾರ್ಯವನ್ನು ಕರ್ನಾಟಕ ಕುರಿ ಮತ್ತು ಉಣ್ಣೆ ಅಭಿವೃದ್ಧಿ ನಿಗಮ ನಿಯಮಿತ ಇವರ ಮೂಲಕ ಕಾರ್ಯಗತಗೊಳಿಸಲು ಆದೇಶಿಸಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಟಿಪ್ಪಣಿಯಲ್ಲಿ ಮಾನ್ಯ ಕಂದಾಯ ಮಂತ್ರಿಗಳ, ಮಾನ್ಯ ಮುಖ್ಯಮಂತ್ರಿಗಳ ಪತ್ರ ಸಂಖ್ಯೆ:636 ಮತ್ತು 637 ಎಸ್‌ಟಿಪಿ/2009 ದಿನಾಂಕ:23.3.2009ರಲ್ಲಿನ ಆದೇಶದಂತೆ ಅನುದಾನ ಬಿಡುಗಡೆ ಮಾಡುವಂತೆ ಸೂಚಿಸಿರುತ್ತಾರೆ.

ಮೇಲೆ (3)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ 2009–10ನೇ ಸಾಲಿನಲ್ಲಿ ಮುಂಗಾರು ಮಳೆ ಕೊರತೆಯಿಂದ ರಾಜ್ಯದ 20 ಜಿಲ್ಲೆಗಳ 86 ತಾಲ್ಲೂಕುಗಳನ್ನು ಬರ ಪೀಡಿತ ತಾಲ್ಲೂಕುಗಳೆಂದು ಘೋಷಿಸಲಾಗಿದೆ.

ಸರ್ಕಾರದ ಆದೇಶ ಸಂಖ್ಯೆ:ಕಂಇ 87 ಟಿಎನ್‌ಆರ್ 2009 ದಿನಾಂಕ:29.8.2009ರಲ್ಲಿ ಬರ ಪೀಡಿತವೆಂದು ಘೋಷಿಸಿರುವ ತಾಲ್ಲೂಕುಗಳಲ್ಲಿ ಜಾನುವಾರು ಮತ್ತು ಕುರಿಗಳಿಗೆ ಉಂಟಾಗಬುಹುದಾದ ಮೇವಿನ ಕೊರತೆಯನ್ನು ನೀಗಿಸಲು ರೈತರಿಗೆ ಮೇವಿನ ಬೀಜದ ಕಿಟ್‌ಗಳನ್ನು ಖರೀದಿಸಿ ಸರಬರಾಜು ಮಾಡಲು ಆದೇಶ ಹೊರಡಿಸಲಾಗಿತ್ತು. ಸದರಿ ಆದೇಶದಲ್ಲಿ

ಖರೀದಿ ನಿಯಮಗಳನ್ನು ಪಾಲಿಸುವಂತೆ ತಿಳಿಸಲಾಗಿತ್ತು. ಪ್ರಕೃತಿ ವಿಕೋಪ ಅಥವಾ ಸರ್ಕಾರವು ಘೋಷಿಸಿದ ತುರ್ತು ಪರಿಸ್ಥಿತಿ ಅವಧಿಯಲ್ಲಿ ಪಾರದರ್ಶಕತೆ ಅಧಿನಿಯಮ 4(ಎ) ಪ್ರಕಾರ ಪ್ರಕೃತಿ ವಿಕೋಪಗಳ ಅಥವಾ ಸರ್ಕಾರವು ಘೋಷಿಸಿದ ತುರ್ತು ಪರಿಸ್ಥಿತಿಯ ಅವಧಿಯಲ್ಲಿ ಪ್ರಕೃತಿ ವಿಕೋಪ ಪರಿಹಾರಕ್ಕೆ ಸಂಬಂಧಿಸಿದಂತೆ ಉಪಯೋಗಿಸಲು ಖರೀದಿಸುವ ವಸ್ತುಗಳಿಗೆ ಹಾಗೂ ಪಡೆಯುವ ಸೇವೆಗಳಿಗೆ ಈ ನಿಯಮಗಳ ಅನ್ವಯಿಸುವಿಕೆಗೆ ವಿನಾಯಿತಿ ಇರುತ್ತದೆ.

ಮೇಲೆ (3)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಸರ್ಕಾರವು 20 ಜಿಲ್ಲೆಗಳ 86 ತಾಲ್ಲೂಕುಗಳನ್ನು ಬರ ಪೀಡಿತವೆಂದು ಘೋಷಿಸಿರುತ್ತದೆ. ಈ ಹಿನ್ನೆಲೆಯಲ್ಲಿ ಪ್ರಕೃತಿ ವಿಕೋಪವಾದ ಬರ ಪರಿಸ್ಥಿತಿಯಲ್ಲಿ ತುರ್ತಾಗಿ ಮೇವು ಬೀಜ ಖರೀದಿಸಿ ಮೇವು ಬೆಳೆಸಲು ಪಾರದರ್ಶಕ ನಿಯಮದಿಂದ ವಿನಾಯ್ತಿ ಇರುತ್ತದೆ. ಪ್ರಕೃತಿ ವಿಕೋಪ ಸಮಯದಲ್ಲಿ ಕೈಗೊಳ್ಳಬಹುದಾದ ಪರಿಹಾರಕ್ಕೆ ಉಪಯೋಗಿಸಲು ಖರೀದಿಸುವ ವಸ್ತುಗಳಿಗೆ/ಪಡೆಯುವ ಸೇವೆಗಳಿಗೆ ಖರೀದಿ ನಿಯಮಗಳಿಂದ ವಿನಾಯ್ತಿ ಇರುವುದರಿಂದ ಮೇಲೆ (4)ರಲ್ಲಿ ಓದಲಾದ ದಿನಾಂಕ:29.8.2009ರ ಆದೇಶವನ್ನು ಹಿಂದಕ್ಕೆ ಪಡೆದು ಬರ ಪೀಡಿತ ತಾಲ್ಲೂಕುಗಳಲ್ಲಿ ಜಾನುವಾರುಗಳಿಗೆ ಹಾಗೂ ಕುರಿಗಳಿಗೆ ಮೇವು ಸರಬರಾಜು ಮಾಡುವ ಅವಶ್ಯಕತೆ ಹಿನ್ನೆಲೆಯಲ್ಲಿ ಕೆಳಕಂಡಂತೆ ಪರಿಷ್ಕೃತ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 87 ಟಿಎನ್‌ಆರ್ 2009, ಬೆಂಗಳೂರು, ದಿನಾಂಕ:1ನೇ ಸೆಪ್ಟೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರಿ ಆದೇಶ ಸಂಖ್ಯೆ:ಕಂಇ 87 ಟಿಎನ್‌ಆರ್ 2009 ದಿನಾಂಕ:29.8.2009ರ ಆದೇಶವನ್ನು ಹಿಂದಕ್ಕೆ ಪಡೆಯಲಾಗಿದೆ.

ಬರ ಪೀಡಿತ ತಾಲ್ಲೂಕುಗಳಲ್ಲಿ ಜಾನುವಾರು ಮತ್ತು ಕುರಿಗಳಿಗೆ ಮೇವಿನ ಕೊರತೆಯನ್ನು ನಿಭಾಯಿಸಲು ನೀರಾವರಿ ಆಶ್ರಿತ ಮತ್ತು ಮಳೆ ಆಶ್ರಿತ ಪ್ರದೇಶಗಳಲ್ಲಿ ಮೇವು ಬೆಳೆದು ಸಂಗ್ರಹಿಸಲು ಮತ್ತು ಮೇವು ಸರಬರಾಜು ಮಾಡುವ ಸಲುವಾಗಿ ಮೇವಿನ ಬೀಜದ ಮಿನಿ ಕಿಟ್‌ಗಳನ್ನು ಖರೀದಿಸಿ ರೈತರಿಗೆ ಉಚಿತವಾಗಿ ಸರಬರಾಜು ಮಾಡಲು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಸಹಕಾರ ಮಾರಾಟ ಮಹಾಮಂಡಳ ನಿಯಮಿತ ಬೆಂಗಳೂರು ಇವರಿಗೆ ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ರೂ., 700.00 ಲಕ್ಷಗಳನ್ನು (ರೂ. ಏಳುನೂರು ಲಕ್ಷಗಳು ಮಾತ್ರ) ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನದಲ್ಲಿ ರೂ. 500.00 ಲಕ್ಷಗಳ ಮೇವಿನ ಬೀಜದ ಮಿನಿ ಕಿಟ್‌ಗಳನ್ನು ಕರ್ನಾಟಕ ರಾಜ್ಯ ಸಹಕಾರ ಮಾರಾಟ ಮಹಾಮಂಡಳ ನಿಯಮಿತ ಬೆಂಗಳೂರು ಇವರಿಂದ ಪಡೆದು ಕೆಳಕಂಡಂತೆ 20 ಜಿಲ್ಲೆಗಳಿಗೆ ವಿತರಿಸುವ ಕಾರ್ಯಕ್ರಮವನ್ನು ಪಶುಪಾಲನ ಮತ್ತು ಪಶುವೈದ್ಯ ಸೇವಾ ಇಲಾಖೆ, ಕಾರ್ಯಗತಗೊಳಿಸಲು ಆದೇಶಿಸಿದೆ.

| ಕ್ರ.ಸಂ | ಜಿಲ್ಲೆಗಳ ಹೆಸರು | (ರೂ. ಲಕ್ಷಗಳಲ್ಲಿ) |
|---|---|---|
| 1 | ಬೆಂಗಳೂರು ನಗರ | 23.24 |
| 2 | ಬೆಂಗಳೂರು ಗ್ರಾಮಾಂತರ | 17.43 |
| 3 | ರಾಮನಗರ | 5.81 |
| 4 | ಕೋಲಾರ | 29.05 |
| 5 | ಚಿಕ್ಕಬಳ್ಳಾಪುರ | 34.86 |
| 6 | ತುಮಕೂರು | 34.86 |
| 7 | ಚಿತ್ರದುರ್ಗ | 23.24 |
| 8 | ದಾವಣಗೆರೆ | 5.81 |
| 9 | ಚಾಮರಾಜನಗರ | 17.43 |
| 10 | ಮೈಸೂರು | 11.62 |
| 11 | ಮಂಡ್ಯ | 34.86 |
| 12 | ಬಳ್ಳಾರಿ | 34.86 |
| 13 | ಕೊಪ್ಪಳ | 23.24 |
| 14 | ರಾಯಚೂರು | 29.05 |
| 15 | ಗುಲಬರ್ಗಾ | 58.44 |
| 16 | ಬೀದರ್ | 29.05 |
| 17 | ಬೆಳಗಾಂ | 23.24 |
| 18 | ಬಾಗಲಕೋಟೆ | 23.24 |
| 19 | ಬಿಜಾಪುರ | 29.05 |
| 20 | ಗದಗ | 11.62 |
| | **ಒಟ್ಟು** | **500.00** |

ರೂ. 200.00 ಲಕ್ಷಗಳ ಮೇವಿನ ಬೀಜದ ಮಿನಿ ಕಿಟ್‌ಗಳನ್ನು ಕರ್ನಾಟಕ ರಾಜ್ಯ ಸಹಕಾರ ಮಾರಾಟ ಮಹಾಂಡಳ ನಿಯಮಿತ ಬೆಂಗಳೂರು. ಇವರಿಂದ ಪಡೆದು ರಾಜ್ಯದಲ್ಲಿನ 170 ಕುರಿ ಮತ್ತು ಉಣ್ಣೆ ಉತ್ಪಾದಕರ ಸಹಕಾರ ಸಂಘಗಳಲ್ಲಿನ ಸದಸ್ಯರುಗಳಿಗೆ (ಫಲಾನುಭವಿಗಳಿಗೆ) ವಿತರಿಸುವ ಕಾರ್ಯಕ್ರಮವನ್ನು ಕುರಿ ಮತ್ತು ಉಣ್ಣೆ ಅಭಿವೃದ್ಧಿ ನಿಗಮ ನಿಯಮಿತ ಇವರು ಕಾರ್ಯಗತಗೊಳಿಸಲು ಆದೇಶಿಸಿದೆ.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಸಹಕಾರ ಮಾರಾಟ ಮಹಾಮಂಡಳ ನಿಯಮಿತ ಬೆಂಗಳೂರು, ಇವರು ಪೇಯೀಸ್ ರಶೀದಿಯನ್ನು ತಯಾರಿಸಿ ಸರ್ಕಾರದ ಕಾರ್ಯದರ್ಶಿಗಳು, ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ) ಇವರಿಂದ ಮೇಲು ರುಜುಪಡೆದು ರಾಜ್ಯ ಹುಜೂರು ಖಜಾನೆ, ಬೆಂಗಳೂರು, ಇಲ್ಲಿಂದ ಡ್ರಾ ಮಾಡಲು ಆದೇಶಿಸಿದೆ.

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ 2245–01–104–0–00–100 (ಯೋಜನೇತರ) ಅಡಿಯಲ್ಲಿ ಭರಿಸುವುದು.

ಮೇವಿನ ಬೀಜದ ಮಿನಿ ಕಿಟ್‌ಗಳನ್ನು ಖರೀದಿಸುವಾಗ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಇವರು ನಿಗಧಿ ಪಡಿಸಿದ ಉತ್ತಮ ಗುಣಮಟ್ಟದ ಮೇವಿನ ಬೀಜದ ಕಿಟ್‌ಗಳನ್ನು ಖರೀದಿಸಲು ಆದೇಶಿಸಿದೆ.

ಬರ ಪರಿಸ್ಥಿತಿಯಲ್ಲಿ ಬರ ಪರಿಹಾರ ಕಾರ್ಯಕ್ಕೆ ಉಪಯೋಗಿಸಲು ಖರೀದಿಸುವ ವಸ್ತುಗಳಿಗೆ ಮತ್ತು ಪಡೆಯುವ ಸೇವೆಗಳಿಗೆ ಪಾರದರ್ಶಕ ನಿಯಮದಿಂದ ವಿನಾಯ್ತಿ ಇರುತ್ತದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 857 ವೆಚ್ಚ–7/2009 ದಿನಾಂಕ:21.8.2009 ಮತ್ತು ಆಇ 692 ವೆಚ್ಚ–7/2009 ದಿನಾಂಕ:26.8.2009ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2139

**ರಾಮಚಂದ್ರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ ಮತ್ತು ಸೇವೆಗಳು–2)

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಬೆಂಗಳೂರು ಕಂದಾಯ ತಾಲ್ಲೂಕಿನಲ್ಲಿ ಖಾಲಿಯಿರುವ 5 ನೋಟರಿಗಳನ್ನು ನೇಮಿಸುವ ಬಗ್ಗೆ.

**ಉಲ್ಲೇಖ :**
1. ಸರ್ಕಾರಿ ಪತ್ರ ಸಂಖ್ಯೆ :ಲಾ 39 ಎಲ್‌ಸಿಎಲ್ 09 ದಿನಾಂಕ :6.2.09.
2. ಪ್ರಧಾನ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರು ಬೆಂಗಳೂರು ನಗರ ಇವರ ಪತ್ರ ಸಂಖ್ಯೆ : Adm-I/B/149/2009 ದಿನಾಂಕ :27.6.09.
3. ನೋಟರಿಗಳ ತಿದ್ದುಪಡಿ ನಿಯಮಗಳು 2009ರ ಅಧಿಸೂಚನೆ ಸಂ :GSR 114 (E) ದಿನಾಂಕ :24.2.09.
4. ಅಧಿಸೂಚನೆ ಲಾ 61 ಎಲ್‌ಸಿಎಲ್ 09 ದಿನಾಂಕ :18.7.09.
5. ಸಂದರ್ಶನ ಸೂಚನಾ ಪತ್ರ ಸಂಖ್ಯೆ :ಲಾ 39 ಎಲ್‌ಸಿಎಲ್ 2009 ದಿನಾಂಕ :20.7.09.
6. ಸಂದರ್ಶನ ಮಂಡಳಿಯ ನೋಟರಿಗಳ ಆಯ್ಕೆ ನಡವಳಿ ದಿನಾಂಕ :5.8.09 ಮತ್ತು ಪತ್ರ ದಿನಾಂಕ :10/11.8.2009.

**ಪ್ರಸ್ತಾವನೆ:**

ಬೆಂಗಳೂರು ಕಂದಾಯ ತಾಲ್ಲೂಕಿನಲ್ಲಿ ನೋಟರಿಯಾಗಿ ಕರ್ತವ್ಯ ನಿರ್ವಹಿಸುತ್ತಿದ್ದ (1) ಶ್ರೀಮತಿ ಸಿ. ಶೇಷಮ್ಮ, (2) ಶ್ರೀ ದೊರೆರಾಜುಲು ನಾಯ್ಡು, (3) ಶ್ರೀಮತಿ ಜುಬೇರಿಯಾ ಬೇಗಂ, (4) ಶ್ರೀಮತಿ ಭಾಗ್ಯಕುಮಾರಿ ಮತ್ತು (5) ಶ್ರೀ ಎಸ್.ಬಿ. ಹಿರೇಗೌಡರ್ ರವರುಗಳಿಂದ ತೆರವಾದ 5 ಖಾಲಿ ನೋಟರಿ ಹುದ್ದೆಗಳನ್ನು ಭರ್ತಿ ಮಾಡಲು ನೋಟರಿಗಳ ಅಧಿನಿಯಮ/ನಿಯಮಗಳು ಹಾಗೂ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತು) ನಿಯಮಗಳಡಿಯಲ್ಲಿ ಪರಿಶೀಲಿಸಿ ಸೂಕ್ತ ಪ್ರಸ್ತಾವನೆಯನ್ನು ಕಳುಹಿಸಿಕೊಡುವಂತೆ ಪ್ರಧಾನ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಧಶರು, ಬೆಂಗಳೂರು ಇವರನ್ನು ಉಲ್ಲೇಖಿತ (1)ರ ದಿನಾಂಕ:6.2.2009ರ ಪತ್ರದಲ್ಲಿ ಕೋರಲಾಗಿತ್ತು. ಅದರಂತೆ ಮೇಲೆ (2)ರಲ್ಲಿ ಓದಲಾದ ದಿನಾಂಕ:27.6.2009ರ ಪತ್ರದಲ್ಲಿ ಪ್ರಧಾನ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ನಗರ ಇವರು 125 ಜನರ ಮೆಮೋರಿಯಲ್ಸ್‌ಗಳನ್ನೊಳಗೊಂಡ ಪ್ರಸ್ತಾವನೆಯನ್ನು ಸಲ್ಲಿಸಿದ್ದರು. ಉಲ್ಲೇಖಿತ (3)ರ ನೋಟರಿಗಳ ತಿದ್ದುಪಡಿ ನಿಯಮಗಳು 2009 ರನ್ವಯ ಕರ್ನಾಟಕ ರಾಜ್ಯದಿಂದ ನೋಟರಿಗಳ ನೇಮಕಕ್ಕಾಗಿ ದಿನಾಂಕ:18.7.2009ರ ಉಲ್ಲೇಖಿತ (4)ರ ಅಧಿಸೂಚನೆಯಲ್ಲಿ 3 ಸದಸ್ಯರನ್ನೊಳಗೊಂಡ ಸಂದರ್ಶನಾ ಮಂಡಳಿಯನ್ನು ರಚಿಸಲಾಗಿದೆ. ಅದರಂತೆ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಪ್ರಸ್ತಾವನೆಯನ್ನು ಸಂದರ್ಶನ ಮಂಡಳಿಯು ಪರಿಶೀಲನೆಗೆ ಕಳಿಸಿ ಉಲ್ಲೇಖಿತ (5)ರ ದಿನಾಂಕ:20.7.2009 ರಲ್ಲಿ ಎಲ್ಲಾ ಅಭ್ಯರ್ಥಿಗಳನ್ನು ಸಂದರ್ಶನ ಮಂಡಳಿಯ ಮುಂದೆ ಸಂದರ್ಶಕ್ಕೆ ಹಾಜರಾಗುವಂತೆ ಸೂಚಿಸಲಾಗಿತ್ತು. ಸಂದರ್ಶನ ಮಂಡಳಿಯು ಸಂದರ್ಶನ ನಡೆಸಿ ಉಲ್ಲೇಖಿತ (6)ರ ನಡವಳಿ ದಿನಾಂಕ:5.8.2009ರಲ್ಲಿ 5 ಜನರ ಆಯ್ಕೆ ಪಟ್ಟಿಯನ್ನು ಸಲ್ಲಿಸಿದೆ.

